KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮೇ ೧೧, ೨೦೦೬ (ವೈಶಾಖ ೨೧, ಶಕ ವರ್ಷ ೧೯೨೮) | ಸಂಚಿಕೆ ೧೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** 2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಕೇಂದ್ರ ಸರ್ಕಾರದ ಎರಡನೇ ಕಂತಿನ ಅನುದಾನಕ್ಕೆ ಪೂರಕವಾಗಿ ತಾಲ್ಲೂಕು ಪಂಚಾಯತಿಗಳಿಗೆ ಶೇಕಡಾ 30ರ ಭಾಗಾಂಶದ ರಾಜ್ಯದ ಪಾಲಿನ ಎರಡನೇ ಕಂತಿನ ಬಾಕಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** 1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ವಿ.24015/ 12/2005 ಎಸ್‌ಜಿಆರ್‌ವೈ-II / Sl.No.165, ದಿನಾಂಕ: 05.01.2006.
2. ರಾಜ್ಯ ಸರ್ಕಾರದ ಸಮಸಂಖ್ಯೆ ಆದೇಶದ ದಿನಾಂಕ: 28.01.2006.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಉಲ್ಲೇಖ (1)ರ ಆದೇಶದಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ 2005-06ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಉಡುಪಿ, ಬೆಳಗಾಂ ಮತ್ತು ಕೊಡಗು ಜಿಲ್ಲಾ ಪಂಚಾಯತ್‌ಗಳಿಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಲಾಗಿದ್ದು, ಅದರಂತೆ ರಾಜ್ಯ ಸರ್ಕಾರವು ಸದರಿ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಶೇಕಡಾ 30ರ ಭಾಗಾಂಶದ ರೂ.68.182 ಲಕ್ಷಗಳನ್ನು (ರೂ.ಅರವತ್ತೆಂಟು ಲಕ್ಷ ಹದಿನೆಂಟು ಸಾವಿರದ ಇನ್ನೂರು ಮಾತ್ರ) ಉಲ್ಲೇಖ (2)ರನ್ವಯ ಬಿಡುಗಡೆ ಮಾಡಲಾಗಿದೆ. ಸದರಿ ಆದೇಶದಲ್ಲಿ ಈ ಮೂರು ಜಿಲ್ಲಾ ಪಂಚಾಯತಿಗಳ ತಾಲ್ಲೂಕು ಪಂಚಾಯತಿಗಳಿಗೆ ಒದಗಿಸಲಾದ ಅನುದಾನದಲ್ಲಿ ಕೊರತೆಯಿರುವುದರಿಂದ, ಎರಡನೇ ಕಂತಿನ ಅನುದಾನವನ್ನು ಪೂರ್ಣ ಪ್ರಮಾಣದಲ್ಲಿ ಬಿಡುಗಡೆ ಮಾಡಿರುವುದಿಲ್ಲ. ಸದರಿ ಕೊರತೆ ಇದ್ದ 3 ಜಿಲ್ಲೆಗಳಿಗೆ, ಪುನರ್ ವಿನಿಯೋಗದ ಮೂಲಕ, ಬಾಕಿ ಇರುವ ಅನುದಾನವನ್ನು ಅನುಬಂಧದಲ್ಲಿ ನಮೂದಿಸಿರುವಂತೆ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 64. ಎಸ್‌ಜಿಆರ್‌ವೈ, 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2005-06ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ತಾಲ್ಲೂಕು ಪಂಚಾಯತ್ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಉಡುಪಿ, ಬೆಳಗಾಂ ಮತ್ತು ಕೊಡಗು ಜಿಲ್ಲಾ ಪಂಚಾಯತಿಗಳಿಗೆ ರಾಜ್ಯದ ಆಯವ್ಯಯದಲ್ಲಿ ತಾಲ್ಲೂಕು ಪಂಚಾಯತ್‌ಗಳಿಗೆ ಪುನರ್ವಿನಿಯೋಗದ ಮೂಲಕ ಒದಗಿಸಲಾದ ಅನುದಾನದಿಂದ ಎರಡನೇ ಕಂತಿನ ಬಾಕಿ ಅನುದಾನವಾದ ರೂ.4.568 ಲಕ್ಷ (ರೂ.ನಾಲ್ಕು ಲಕ್ಷ ಐವತ್ತಾರು ಸಾವಿರ ಎಂಟು ನೂರುಗಳು ಮಾತ್ರ) ಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ತಾಲ್ಲೂಕು ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ.

2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ ಸುತ್ತೋಲೆಗಳ ಮೂಲಕ ಹಾಗೂ ಮಾರ್ಗಸೂಚಿಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

2005-06ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ಒಟ್ಟು ಲಭ್ಯವಿರುವ ಸಂಪನ್ಮೂಲಗಳಲ್ಲಿ (ನಗದು+ಆಹಾರಧಾನ್ಯ) 01.04.2006ಕ್ಕೆ ಇರುವ ಆರಂಭಿಕ ಶಿಲ್ಕು ಶೇಕಡಾ 10ಕ್ಕಿಂತ ಮೀರಬಾರದು. ಅಂದರೆ ಸದರಿ ವರ್ಷದಲ್ಲಿ ಶೇಕಡಾ 90ರಷ್ಟು ಮತ್ತು ಅದಕ್ಕೆ ಮಿಗಿಲಾಗಿ ವೆಚ್ಚ ಮಾಡುವುದು. ಇಲ್ಲದಿದ್ದಲ್ಲಿ ಮುಂದಿನ ವರ್ಷದ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡುವ ಎರಡನೇ ಕಂತಿನ ಅನುದಾನದಲ್ಲಿ ಶೇಕಡಾ 10ರಷ್ಟು ಮೀರಿದ ಹೆಚ್ಚುವರಿ ಅನುದಾನವನ್ನು ಕಡಿತಗೊಳಿಸಲಾಗುವುದು.

ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ತಾಲ್ಲೂಕು ಪಂಚಾಯತ್ "2505- ಗ್ರಾಮೀಣ ಉದ್ಯೋಗ-60- ಇತರೆ ಕಾರ್ಯಕ್ರಮಗಳು-197 ತಾಲ್ಲೂಕು ಪಂಚಾಯತಿಗಳಿಗೆ ಸಹಾಯ-1 ತಾಲ್ಲೂಕು ಪಂಚಾಯತಿಗಳು-04-ರಾಜ್ಯ ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-197-1-04) 2005-06 (ಯೋಜನೆ)"

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ. 2003 ದಿನಾಂಕ: 14.07.2005ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು. ಬಿಡುಗಡೆಯಾದ ಅನುದಾನವನ್ನು ಕೂಡಲೇ ನಗದೀಕರಿಸಿಕೊಂಡು ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಳಸಿಕೊಳ್ಳಲು ತಾಲ್ಲೂಕು ಪಂಚಾಯತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಲು, ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಿದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಗ್ರಾಅಪ/ 133/ ಪಿಬಿಎಸ್/ 2006 ದಿನಾಂಕ: 08.03.2006ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ANNEXURE
## G.O.NO.RDP:64:SGRY:2005, BANGALORE, DATED:15.03.2006

Statement showing the details of the release of balance amount of IInd instalment of State share under SGRY during 2005-06 to Taluk Panchayats.

**(Rs.in lakhs)**

| Sl. No. | District | Object Code | Balance of II instalment of State share being released to TP (30%) |
|---|---|---|---|
| 1. | Udupi | 457 | 0.131 |
| 2. | Belgaum | 413 | 2.690 |
| 3. | Kodagu | 411 | 1.747 |
| **Total** | | | **4.568** |

**G.B. HIREMANIYAVAR**
Director
Self Employment Programmes
& E/o.Dy.Secretary to Government
Rural Development & Panchayat Raj Dept.
Phone 080-22257341 FAX 080-22257415.

PR-479

**ವಿಷಯ:** 2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಕೇಂದ್ರ ಸರ್ಕಾರದ ಮೊದಲನೇ ಕಂತಿನ ಅನುದಾನಕ್ಕೆ ಪೂರಕವಾಗಿ ಜಿಲ್ಲಾ ಪಂಚಾಯತಿಗಳಿಗೆ ಶೇಕಡಾ 20ರ ಭಾಗಾಂಶದ ರಾಜ್ಯದ ಪಾಲಿನ ಬಾಕಿ ಮೊದಲನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುತ್ತಿರುವ ಬಗ್ಗೆ. (8 ಜಿಲ್ಲೆಗಳಿಗೆ)

**ಉಲ್ಲೇಖ:**1.ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/12/ 2005/ ಎಸ್‌ಜಿಆರ್‌ವೈ-II/ Sl.No.80 ದಿನಾಂಕ.5.10.2005.
2. ರಾಜ್ಯ ಸರ್ಕಾರದ ಆದೇಶದ ಸಮಸಂಖ್ಯೆ ದಿನಾಂಕ.21.12.05.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಈಗಾಗಲೇ ಶೇಕಡಾ 44ರಷ್ಟು ಭಾಗಶ: ಅನುದಾನವನ್ನು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ರಾಜ್ಯದ ಎಲ್ಲಾ 27 ಜಿಲ್ಲಾ ಪಂಚಾಯತಿಗಳಿಗೆ ಮೊದಲನೇ ಕಂತಾಗಿ ಬಿಡುಗಡೆ ಮಾಡಿರುವುದು ಸರಿಯಷ್ಟೆ. ಅದಕ್ಕೆ ಪೂರಕವಾಗಿ, ರಾಜ್ಯ ಸರ್ಕಾರವು ಕೂಡ ತನ್ನ ಪಾಲಿನ ಅನುದಾನವನ್ನು ಪ್ರತ್ಯೇಕವಾಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಬಿಡುಗಡೆ ಮಾಡಲಾಗಿದೆ. ಮುಂದುವರಿದು, ಕೇಂದ್ರ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಬಾಕಿ ಇರುವ ಶೇಕಡಾ 16ರಷ್ಟಿನ ಮೊದಲನೇ ಕಂತಿನ ಅನುದಾನವನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ನೇರವಾಗಿ ಬಿಡುಗಡೆ ಮಾಡಿ ಪೂರಕವಾಗಿ ರಾಜ್ಯ ಸರ್ಕಾರವು ಕೂಡ ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. ಅದರಂತೆ, ರಾಜ್ಯ ಸರ್ಕಾರವು ಉಲ್ಲೇಖ(2) ರಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಬಾಕಿ ಇರುವ ಮೊದಲನೇ ಕಂತಿನ ಶೇಕಡಾ 20ರ ಭಾಗಾಂಶದ ರೂ.201.722 ಲಕ್ಷಗಳನ್ನು (ರೂ.ಎರಡು ಕೋಟಿ ಒಂದು ಲಕ್ಷದ ಎಪ್ಪತ್ತೆರಡು ಸಾವಿರದ ಇನ್ನೂರು ಮಾತ್ರ) ಬಿಡುಗಡೆ ಮಾಡಲಾಗಿದ್ದು ಕೆಲವು ಜಿಲ್ಲಾ ಪಂಚಾಯತಿಗಳಿಗೆ ಒದಗಿಸಲಾದ ಅನುದಾನದಲ್ಲಿ ಕೊರತೆ ಇದ್ದ ಕಾರಣ ಪೂರ್ಣ ಪ್ರಮಾಣದಲ್ಲಿ ಅನುದಾನ ಬಿಡುಗಡೆ ಮಾಡಿರುವುದಿಲ್ಲ. ಸದರಿ ಕೊರತೆ ಇರುವ 8 ಜಿಲ್ಲೆಗಳಿಗೆ, ಈಗ ಪುನರ್ ವಿನಿಯೋಗದ ಮೂಲಕ ಬಾಕಿ ಇರುವ ಅನುದಾನ ರೂ.22.417 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿರುವಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 64: ಎಸ್‌ಜಿಆರ್‌ವೈ, 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2005-06ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ 8 ಜಿಲ್ಲಾ ಪಂಚಾಯತಿಗಳಿಗೆ ಬಾಕಿ ಇರುವ ರಾಜ್ಯದ ಪಾಲಿನ ಮೊದಲನೇ ಕಂತಿನ ಭಾಗಶ: ಅನುದಾನವಾದ ರೂ.22.417 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ರಾಜ್ಯದ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಬಿಡುಗಡೆ ಮಾಡಿದೆ.

2005-06ನೇ ಸಾಲಿನ್ಲಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ, ಸುತ್ತೋಲೆಗಳ ಮೂಲಕ ಹಾಗೂ ಮಾರ್ಗ ಸೂಚಿಗಳಲ್ಲಿ ತಿಳಿಸಿರುವ ರೀತ್ಯಾ, ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಜಿಲ್ಲಾ ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-1-ಜಿಲ್ಲಾ ಪಂಚಾಯತಿಗಳು-04- ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-196-1-04) 2005-06 (ಯೋಜನೆ) "

ಖಜಾನೆಯಿಂದ ಅನುದಾನವನ್ನು ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ.ಎಫ್‌ಡಿ. 7. ಜೆಡ್‌ಪಿಎ. 2003 ಬೆಂಗಳೂರು, ದಿನಾಂಕ.14.7.2005ರನ್ವಯ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು. ಬಿಡುಗಡೆಯಾದ ಅನುದಾನವನ್ನು ಕೂಡಲೇ ನಗದೀಕರಿಸಿಕೊಂಡು ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಳಸಿಕೊಳ್ಳಲು ಆದೇಶಿಸಿದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ.ಗ್ರಾಅಪ.133.ಪಿಬಿಎಸ್.2006 ದಿನಾಂಕ.08.03.2006ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ANNEXURE**

**G.O.NO.RDP:64:SGRY:2005 DATED:15.03.2006**

Statement showing the details of the Release of partial balance of Ist instalment of State share of assistance to 8 Zilla Panchayats under SGRY during 2005-06.

(Rs.in lakhs)

| Sl. No. | District | Object head prescribed to the districts | Balance of Ist instalment of State share being released to ZP (20%) |
|---|---|---|---|
| 1 | 2 | 3 | 4 |
| 1 | Belgaum | 413 | 5.858 |
| 2 | Chitradurga | 403 | 2.635 |
| 3 | Gulbarga | 417 | 3.675 |
| 4 | Kodagu | 411 | 2.698 |
| 5 | Kolar | 404 | 3.270 |
| 6 | Koppal | 466 | 0.631 |
| 7 | Mysore | 407 | 2.306 |
| 8 | Udupi | 457 | 1.344 |
| | **Total:** | | **22.417** |

**G.B. HIREMANIYAVAR**
Director
Self Employment Programmes
& E/o.Dy.Secretary to Government
Rural Development & Panchayat Raj Dept.
Phone 080-22257341 FAX 080-22257415.

PR-480

**ವಿಷಯ:** 2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ ಯಡಿ ಕೇಂದ್ರ ಸರ್ಕಾರದ ಎರಡನೇ ಕಂತಿನ ಅನುದಾನಕ್ಕೆ ಪೂರಕವಾಗಿ ಗ್ರಾಮ ಪಂಚಾಯತ್‌ಗಳಿಗೆ ಶೇಕಡಾ 50ರ ಭಾಗಾಂಶದ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ. (ಎರಡು ಜಿಲ್ಲೆಗಳಿಗೆ)

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/12/2005/ಎಸ್‌ಜಿಆರ್‌ವೈ-II/ Sl. No.210 ದಿನಾಂಕ.8.2.2006.

**ಪ್ರಸ್ತಾವನೆ:**

ಉಲ್ಲೇಖದಲ್ಲಿ ಕೇಂದ್ರ ಸರ್ಕಾರವು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ 2005-06ನೇ ಸಾಲಿಗೆ, ಎರಡನೇ ಕಂತಿನ ಅನುದಾನವನ್ನು ರಾಜ್ಯದ ಬಳ್ಳಾರಿ ಹಾಗೂ ಚಾಮರಾಜನಗರ ಜಿಲ್ಲಾ ಪಂಚಾಯತಿಗಳಿಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ಸದರಿ ಜಿಲ್ಲೆಗಳಿಗೆ ಬಿಡುಗಡೆ ಮಾಡಲು ಆದೇಶಿಸಿದೆ. ಅದರಂತೆ ರಾಜ್ಯ ಸರ್ಕಾರವು ಸದರಿ ಜಿಲ್ಲಾ ಪಂಚಾಯತ್‌ಗಳ ಗ್ರಾಮ ಪಂಚಾಯತಿಗಳಿಗೆ ತನ್ನ ಪಾಲಿನ ಎರಡನೇ ಕಂತಿನ ಶೇಕಡಾ 50ರ ಭಾಗಾಂಶದ ರೂ.90.70 ಲಕ್ಷಗಳನ್ನು (ರೂ.ತೊಂಭತ್ತು ಲಕ್ಷದ ಎಪ್ಪತ್ತು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿರುವಂತೆ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 64. ಎಸ್‌ಜಿಆರ್‌ವೈ, 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2005-06ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಗ್ರಾಮ ಪಂಚಾಯತಿಗಳ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ ಬಳ್ಳಾರಿ ಹಾಗೂ ಚಾಮರಾಜನಗರ ಜಿಲ್ಲಾ ಪಂಚಾಯತಿಗಳಿಗೆ ರಾಜ್ಯದ ಆಯವ್ಯಯದಲ್ಲಿ ಗ್ರಾಮ ಪಂಚಾಯತಿಗಳಿಗೆ ಒದಗಿಸಲಾದ ಆನುದಾನದಿಂದ, ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವಾದ ರೂ.90.70 ಲಕ್ಷಗಳನ್ನು (ರೂ.ತೊಂಭತ್ತು ಲಕ್ಷದ ಎಪ್ಪತ್ತು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ.

2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ, ಸುತ್ತೋಲೆಗಳಲ್ಲಿ ಹಾಗೂ ಮಾರ್ಗಸೂಚಿಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

2005-06ನೇ ಸಾಲಿನಲ್ಲಿ ಲಭ್ಯವಿರುವ ಒಟ್ಟು ಸಂಪನ್ಮೂಲಗಳಲ್ಲಿ ಆರಂಭಿಕ ಶಿಲ್ಕು 1.4.2006 ರಲ್ಲಿದ್ದಂತೆ ಶೇಕಡಾ 10ರಷ್ಟು ಮಿತಿ ಮೀರಬಾರದು. ಶೇಕಡಾ 10ರಷ್ಟಿಗಿಂತ ಮೇಲ್ಪಟ್ಟು ಹೆಚ್ಚುವರಿಯ ಅನುದಾನವನ್ನು ಮುಂದಿನ ವರ್ಷದ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡುವ ಎರಡನೇ ಕಂತಿನ ಅನುದಾನದಲ್ಲಿ ಮುರಿದುಕೊಳ್ಳಲಾಗುವುದು.

ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಗ್ರಾಮ ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತಿಗಳಿಗೆ ಸಹಾಯ-1-ಗ್ರಾಮ ಪಂಚಾಯತಿಗಳು-04-ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-198-1-04) 2005-06 (ಯೋಜನೆ)"

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ. ಎಫ್‌ಡಿ.7.ಜೆಡ್‌ಪಿಎ.2003 ದಿನಾಂಕ. 14.7.05ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು. ಬಿಡುಗಡೆಯಾದ ಅನುದಾನ ವನ್ನು ಕೂಡಲೇ ನಗದೀಕರಿಸಿಕೊಂಡು ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಳಸಿಕೊಳ್ಳಲು ಗ್ರಾಮ ಪಂಚಾಯತಿಗಳ ಅನುಷ್ಠಾನಾಧಿಕಾರಿಗಳಿಗೆ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಗಳ ಮೂಲಕ ಆದೇಶಿಸುವಂತೆ, ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಿದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಗ್ರಾಅಪ.133.ಪಿಬಿಎಸ್.06 ದಿನಾಂಕ.08.03.2006ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ANNEXURE**
**G.O.NO.RDP:64:SGRY:2005, BANGALORE, DATED:15.03.2006**

Statement showing the details of the release of IInd instalment of State share of funds under SGRY during 2005-06 to Grama Panchayats.

**(Rs.in lakhs)**

| Sl. No. | District | Code No. | Release of II instalment Central share | State share to be released | State share being released to TPs.(30%) |
|---|---|---|---|---|---|
| 1 | Bellary | 418 | 296.55 | 98.850 | 49.425 |
| 2 | C.R.Nagar | 456 | 247.65 | 82.550 | 41.275 |
| **Total** | | | **544.20** | **181.400** | **90.700** |

**G.B. HIREMANIYAVAR**
Director
Self Employment Programmes
& E/o.Dy.Secretary to Government
Rural Development & Panchayat Raj Dept.
Phone 080-22257341 FAX 080-22257415.

PR-481

**ವಿಷಯ:** 2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ ಯಡಿ ಕೇಂದ್ರ ಸರ್ಕಾರದ ಎರಡನೇ ಕಂತಿನ ಅನುದಾನಕ್ಕೆ ಪೂರಕವಾಗಿ ಗ್ರಾಮ ಪಂಚಾಯತಿಗಳಿಗೆ ಶೇಕಡಾ 50ರ ಭಾಗಾಂಶದ ರಾಜ್ಯದ ಪಾಲಿನ ಎರಡನೇ ಕಂತಿನ ಬಾಕಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ. (15 ಜಿಲ್ಲೆಗಳಿಗೆ)

**ಉಲ್ಲೇಖ:** 1.ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/12/2005/ಎಸ್‌ಜಿಆರ್‌ವೈ- II/ Sl.No.114 ದಿನಾಂಕ.5.12.2005.
2.ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/12/2005/ಎಸ್‌ಜಿಆರ್‌ವೈ-II/ Sl.No.144 ದಿನಾಂಕ.27.12.2005.
3. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/ 12/ 2005/ಎಸ್‌ಜಿಆರ್‌ವೈ- II/ Sl.No.165 ದಿನಾಂಕ.5.1.2006.
4. ರಾಜ್ಯ ಸರ್ಕಾರದ ಆದೇಶದ ಸಮಸಂಖ್ಯೆ ದಿನಾಂಕ.28.01.06.

**ಪ್ರಸ್ತಾವನೆ:**

ಉಲ್ಲೇಖ(1), (2) ಮತ್ತು (3)ರಲ್ಲಿ ಕೇಂದ್ರ ಸರ್ಕಾರವು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ 2005-06ನೇ ಸಾಲಿಗೆ, ಎರಡನೇ ಕಂತಿನ ಅನುದಾನವನ್ನು ರಾಜ್ಯದ 25 ಜಿಲ್ಲಾ ಪಂಚಾಯತ್‌ಗಳಿಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ಸದರಿ ಜಿಲ್ಲೆಗಳಿಗೆ ಬಿಡುಗಡೆ ಮಾಡಲು ಆದೇಶಿಸಿದೆ. ಅದರಂತೆ ರಾಜ್ಯ ಸರ್ಕಾರವು ಉಲ್ಲೇಖ(4)ರಲ್ಲಿ 25 ಜಿಲ್ಲಾ

ಪಂಚಾಯತಿಗಳ ಗ್ರಾಮ ಪಂಚಾಯತಿಗಳಿಗೆ ತನ್ನ ಪಾಲಿನ ಎರಡನೇ ಕಂತಿನ ಶೇಕಡಾ 50ರ ಭಾಗಾಂಶದ ರೂ.1018.921 ಲಕ್ಷಗಳನ್ನು (ರೂ.ಹತ್ತು ಕೋಟಿ ಹದಿನೆಂಟು ಲಕ್ಷದ ತೊಂಭತ್ತೆರಡು ಸಾವಿರದ ಒಂದು ನೂರು ಮಾತ್ರ) ಬಿಡುಗಡೆ ಮಾಡಿದ್ದು ಕೆಲವು ಜಿಲ್ಲಾ ಪಂಚಾಯತ್‌ಗಳ ಗ್ರಾಮ ಪಂಚಾಯತಿಗಳಿಗೆ ಒದಗಿಸಲಾದ ಅನುದಾನದಲ್ಲಿ ಕೊರತೆಯಿರುವುದರಿಂದ, ಎರಡನೇ ಕಂತಿನ ಅನುದಾನವನ್ನು ಪೂರ್ಣ ಪ್ರಮಾಣದಲ್ಲಿ ಬಿಡುಗಡೆ ಮಾಡಿರುವುದಿಲ್ಲ. ಈಗ ಸದರಿ ಕೊರತೆ ಇರುವ ಜಿಲ್ಲೆಗಳಿಗೆ, ಪುನರ್ ವಿನಿಯೋಗದ ಮೂಲಕ, ಬಾಕಿ ಇರುವ ರೂ.234.869 ಲಕ್ಷ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿದೆ. ಈ ವಿವರಗಳನ್ನು ಅನುಬಂಧದಲ್ಲಿ ನಮೂದಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 64. ಎಸ್‌ಜಿಆರ್‌ವೈ, 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2005-06ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಗ್ರಾಮ ಪಂಚಾಯತ್‌ಗಳ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ 15 ಜಿಲ್ಲಾ ಪಂಚಾಯತ್‌ಗಳಿಗೆ ರಾಜ್ಯದ ಆಯವ್ಯಯದಲ್ಲಿ ಗ್ರಾಮ ಪಂಚಾಯತ್‌ಗಳಿಗೆ ಒದಗಿಸಲಾದ ಆನುದಾನದಿಂದ, ರಾಜ್ಯದ ಪಾಲಿನ ಎರಡನೇ ಕಂತಿನ ಬಾಕಿ ಅನುದಾನವಾದ ರೂ.234.869 ಲಕ್ಷಗಳನ್ನು (ರೂ.ಎರಡು ಕೋಟಿ ಮೂವತ್ತನಾಲ್ಕು ಲಕ್ಷ ಎಂಭತ್ತಾರು ಸಾವಿರದ ಒಂಭೈನೂರು ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ ಗ್ರಾಮ ಪಂಚಾಯತ್ ಗಳಿಗೆ ಬಿಡುಗಡೆ ಮಾಡಿದೆ.

2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ, ಸುತ್ತೋಲೆಗಳಲ್ಲಿ ಹಾಗೂ ಮಾರ್ಗಸೂಚಿಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

2005-06ನೇ ಸಾಲಿನಲ್ಲಿ ಲಭ್ಯವಿರುವ ಒಟ್ಟು ಸಂಪನ್ಮೂಲಗಳಲ್ಲಿ ಆರಂಭಿಕ ಶಿಲ್ಕು 1.4.2006 ರಲ್ಲಿದ್ದಂತೆ ಶೇಕಡಾ 10ರಷ್ಟು ಮಿತಿ ಮೀರಬಾರದು. ಶೇಕಡಾ 10ರಷ್ಟಿಗಿಂತ ಮೇಲ್ಪಟ್ಟು ಹೆಚ್ಚುವರಿಯ ಅನುದಾನವನ್ನು ಮುಂದಿನ ವರ್ಷದ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡುವ ಎರಡನೇ ಕಂತಿನ ಅನುದಾನದಲ್ಲಿ ಮುರಿದುಕೊಳ್ಳಲಾಗುವುದು.

ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಗ್ರಾಮ ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತಿಗಳಿಗೆ ಸಹಾಯ-1-ಗ್ರಾಮ ಪಂಚಾಯತಿಗಳು-04- ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-198-1-04) 2005-06 (ಯೋಜನೆ) "

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ. ಎಫ್‌ಡಿ.7.ಜೆಡ್‌ಪಿಎ.2003 ದಿನಾಂಕ. 14.7.05ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು. ಬಿಡುಗಡೆಯಾದ ಅನುದಾನ ವನ್ನು ಕೂಡಲೇ ನಗದೀಕರಿಸಿಕೊಂಡು ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಳಸಿಕೊಳ್ಳಲು ಗ್ರಾಮ ಪಂಚಾಯತಿಗಳ ಅನುಷ್ಠಾನಾಧಿಕಾರಿಗಳಿಗೆ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಗಳ ಮೂಲಕ ಆದೇಶಿಸುವಂತೆ, ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಿದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಗ್ರಾಅಪ.133.ಪಿಬಿಎಸ್.06 ದಿನಾಂಕ.08.03.2006ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ANNEXURE**
**G.O.NO.RDP:64:SGRY:2005, BANGALORE, DATED: 15.03.2006**

Statement showing the details of release of balance amount of IInd instalment of State share under SGRY during 2005-06 to Grama Panchayats.

**(Rs.in lakhs)**

| Sl. No. | District | Object Code | Balance of IInd instalment of State share being released to GP(50%) |
|---|---|---|---|
| 1 | Bangalore(R) | 402 | 7.650 |
| 2 | D.Kannada | 409 | 0.235 |
| 3 | Chickmagalur | 408 | 0.455 |
| 4 | Chitradurga | 403 | 22.385 |
| 5 | Davanagere | 451 | 14.075 |
| 6 | Bangalore(U) | 401 | 10.320 |
| 7 | Mysore | 407 | 15.655 |
| 8 | Bijapur | 414 | 10.695 |
| 9 | Gulbarga | 417 | 44.920 |
| 10 | Bidar | 419 | 15.970 |

| Sl. No. | District | Object Code | Balance of IInd instalment of State share being released to GP(50%) |
|---|---|---|---|
| 11 | Kolar | 404 | 34.744 |
| 12 | Udupi | 457 | 10.870 |
| 13 | Belgaum | 413 | 20.905 |
| 14 | Kodagu | 411 | 18.415 |
| 15 | Koppal | 466 | 7.575 |
| | **Total:** | | **234.869** |

**G.B. HIREMANIYAVAR**
Director
Self Employment Programmes
& E/o.Dy.Secretary to Government
Rural Development & Panchayat Raj Dept.
Phone 080-22257341 FAX 080-22257415.

PR-482

**ವಿಷಯ:**2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಕೇಂದ್ರ ಸರ್ಕಾರದ ಎರಡನೇ ಕಂತಿನ ಅನುದಾನಕ್ಕೆ ಪೂರಕವಾಗಿ ತಾಲ್ಲೂಕು ಪಂಚಾಯತ್‌ಗಳಿಗೆ ಶೇಕಡಾ 30ರ ಭಾಗಾಂಶದ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/ 12/ 2005/ ಎಸ್‌ಜಿಆರ್‌ವೈ-II/ Sl.No.210 ದಿನಾಂಕ.8.2.2006.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಉಲ್ಲೇಖದ ಪತ್ರದಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ 2005-06ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಬಳ್ಳಾರಿ ಹಾಗೂ ಚಾಮರಾಜನಗರ ಜಿಲ್ಲಾ ಪಂಚಾಯತಿಗಳಿಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. ಅದರಂತೆ ರಾಜ್ಯ ಸರ್ಕಾರವು ಸದರಿ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಶೇಕಡಾ 30ರ ಭಾಗಾಂಶದ ರೂ.54.42 ಲಕ್ಷಗಳನ್ನು (ರೂ.ಐವತ್ತ ನಾಲ್ಕು ಲಕ್ಷದ ನಲವತ್ತೆರಡು ಸಾವಿರ ಮಾತ್ರ) ತಾಲ್ಲೂಕು ಪಂಚಾಯತಿ ಕಾರ್ಯಕ್ರಮಗಳಿಗಾಗಿ ಅನುಬಂಧದಲ್ಲಿ ನಮೂದಿಸಿರುವಂತೆ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 64: ಎಸ್‌ಜಿಆರ್‌ವೈ, 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2005-06ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ತಾಲ್ಲೂಕು ಪಂಚಾಯತ್ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ ಬಳ್ಳಾರಿ ಹಾಗೂ ಚಾಮರಾಜನಗರ ಜಿಲ್ಲಾ ಪಂಚಾಯತ್‌ಗಳಿಗೆ ರಾಜ್ಯದ ಆಯವ್ಯಯದಲ್ಲಿ ತಾಲ್ಲೂಕು ಪಂಚಾಯತ್‌ಗಳಿಗೆ ಒದಗಿಸಲಾದ ಅನುದಾನದಿಂದ, ಎರಡನೇ ಕಂತಿನ ಅನುದಾನವಾದ ರೂ.54.42 ಲಕ್ಷ (ರೂ.ಐವತ್ತ ನಾಲ್ಕು ಲಕ್ಷದ ನಲವತ್ತೆರಡು ಸಾವಿರ ಮಾತ್ರ) ಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ತಾಲ್ಲೂಕು ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ.

2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ ಸುತ್ತೋಲೆಗಳ ಮೂಲಕ ಹಾಗೂ ಮಾರ್ಗಸೂಚಿಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

2005-06ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ಒಟ್ಟು ಲಭ್ಯವಿರುವ ಸಂಪನ್ಮೂಲಗಳಲ್ಲಿ (ನಗದು+ಆಹಾರಧಾನ್ಯ) 1.4.2006ಕ್ಕೆ ಇರುವ ಆರಂಭಿಕ ಶಿಲ್ಕು ಶೇಕಡಾ 10ಕ್ಕಿಂತ ಮೀರಬಾರದು. ಅಂದರೆ ಸದರಿ ವರ್ಷದಲ್ಲಿ ಶೇಕಡಾ 90ರಷ್ಟು ಮತ್ತು ಅದಕ್ಕೆ ಮಿಗಿಲಾಗಿ ವೆಚ್ಚ ಮಾಡುವುದು. ಇಲ್ಲದಿದ್ದಲ್ಲಿ ಮುಂದಿನ ವರ್ಷದ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡುವ ಎರಡನೇ ಕಂತಿನ ಅನುದಾನದಲ್ಲಿ ಶೇಕಡಾ 10ರಷ್ಟು ಮೀರಿದ ಹೆಚ್ಚುವರಿ ಅನುದಾನವನ್ನು ಕಡಿತಗೊಳಿಸಲಾಗುವುದು.

ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ತಾಲ್ಲೂಕು ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-197 ತಾಲ್ಲೂಕು ಪಂಚಾಯತಿಗಳಿಗೆ ಸಹಾಯ-1-ತಾಲ್ಲೂಕು ಪಂಚಾಯತಿಗಳು-04-ರಾಜ್ಯ ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-197-1-04) 2005-06 (ಯೋಜನೆ) "

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ.ಎಫ್‌ಡಿ.7.ಜೆಡ್‌ಪಿಎ.2003 ದಿನಾಂಕ. 14.07.05 ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು. ಬಿಡುಗಡೆಯಾದ ಅನುದಾನವನ್ನು ಕೂಡಲೇ ನಗದೀಕರಿಸಿಕೊಂಡು ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಳಸಿಕೊಳ್ಳಲು ತಾಲ್ಲೂಕು ಪಂಚಾಯತ್‌ಗಳ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಲು, ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಿದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ.ಗ್ರಾಅಪ/ 133/ಪಿಬಿಎಸ್/2006 ದಿನಾಂಕ.08.03.2006ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ANNEXURE**

**G.O.NO.RDP:64:SGRY:2005, BANGALORE, DATED:15.03.2006**

Statement showing the details of the release of IInd instalment of State share of funds under SGRY during 2005-06 to Taluk Panchayats.

**(Rs.in lakhs)**

| Sl. No. | District | Code No. | Release of II instalment Central share | State share to be released | State share being released to TPs.(30%) |
|---|---|---|---|---|---|
| 1 | Bellary | 418 | 296.55 | 98.850 | 29.655 |
| 2 | C.R.Nagar | 456 | 247.65 | 82.550 | 24.765 |
| **Total** | | | **544.20** | **181.400** | **54.420** |

**G.B. HIREMANIYAVAR**
Director
Self Employment Programmes
& E/o.Dy.Secretary to Government
Rural Development & Panchayat Raj Dept.
Phone 080-22257341 FAX 080-22257415.

PR-483

**ಕಂದಾಯ ಸಚಿವಾಲಯ**

**ವಿಷಯ:** ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು, ರಾಯಚೂರು ಜಿಲ್ಲೆ, ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಕಂಇ 10 ಮುನೊಸೊ 2001, (ಪಿ), ದಿನಾಂಕ:13-02-2002.
2. ಸರ್ಕಾರಿ ಆದೇಶ ಸಂಖ್ಯೆ: ಕಂಇ 04 ಮುನೊಸೊ 2004, ದಿನಾಂಕ: 03-12-2005.

**ಪ್ರಸ್ತಾವನೆ:**

ಮೇಲೆ ಓದಲಾದ-1 ರ ಸರ್ಕಾರಿ ಆದೇಶದಲ್ಲಿ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿದ್ದು, ಮೇಲ್-2 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಿ ಆದೇಶಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ:12-02-2006 ಕ್ಕೆ ಮುಕ್ತಾಯಗೊಂಡಿರುತ್ತದೆ. ಸಂಸ್ಥೆಗೆ ಸಂಬಂಧಿಸಿದ ಮೂಲ ದಾವೆ ಸಂಖ್ಯೆ:1/2001 ರ ಪ್ರಕರಣವು ಸಾಕ್ಷಿಗಾಗಿ ಬಾಕಿ ಇರುವುದರಿಂದ, ಆಡಳಿತಾಧಿಕಾರಿ ಅವಧಿಯನ್ನು ಇನ್ನು 6 ತಿಂಗಳವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 04 ಮುನೊಸೊ 2004, ಬೆಂಗಳೂರು, ದಿನಾಂಕ:24ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27-ಎ ಪ್ರಕಾರ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ:13-02-2006 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಈ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.495

**ವಿಷಯ:** ರವೀಂದ್ರನಾಥ ಠಾಗೂರ್ ಇನ್‌ಸ್ಟಿಟ್ಯೂಟ್ ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಕಂಇ 30 ಮುನೊಸೊ 2002, ದಿನಾಂಕ:11-02-2003.
2) ರಿಟ್ ಅರ್ಜಿ ಸಂಖ್ಯೆ:17745-17747/2004, ದಿನಾಂಕ:22-02-2005.
3) ಸರ್ಕಾರದ ಆದೇಶ ಸಂಖ್ಯೆ:ಕಂಇ 54 ಮುನೊಸೊ 2003, ದಿನಾಂಕ:30-09-2005.
4) ಆಡಳಿತಾಧಿಕಾರಿಗಳು, ರವೀಂದ್ರನಾಥ ಠಾಗೂರ್ ಇನ್‌ಸ್ಟಿಟ್ಯೂಟ್ ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬ್ಬಂದಿ/ಸಿಆರ್/49/2003-04, ದಿನಾಂಕ:06-02-2006.

**ಪ್ರಸ್ತಾವನೆ:**

ರವೀಂದ್ರನಾಥ ಠಾಗೂರ್ ಇನ್‌ಸ್ಟಿಟ್ಯೂಟ್, ಆರ್.ಟಿ. ನಗರ, ಬೆಂಗಳೂರು ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ- 11, 12 ಮತ್ತು 13 ಗಳನ್ನು ಉಲ್ಲಂಘನೆ ಮಾಡಿದ್ದರಿಂದ ಮೇಲೆ-1 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ನಂತರ ಆಡಳಿತಾಧಿಕಾರಿ ಅವಧಿಯನ್ನು ಕಾಲ ಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಮೇಲೆ 2 ರಲ್ಲಿ ಓದಲಾದ ರಿಟ್ ಅರ್ಜಿ ಸಂಖ್ಯೆ:17745-17747/2004 ರಲ್ಲಿ ದಿನಾಂಕ: 22-02-2005 ರಂದು ನೀಡಿರುವ ಆದೇಶದನ್ವಯ ಮೇಲೆ-3 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ:10-02-2006 ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ–4 ರಲ್ಲಿ ಓದಲಾದ ಪತ್ರದಲ್ಲಿ ಆಡಳಿತಾಧಿಕಾರಿಯವರು ಮೇಲೆ–(2) ರಲ್ಲಿ ಓದಲಾಗಿರುವ ನ್ಯಾಯಾಲಯದ ಆದೇಶದಂತೆ ಸಂಸ್ಥೆಗೆ ಚುನಾವಣೆ ನಡೆಸಬೇಕಾಗಿದ್ದು, ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಲು. ಆಡಳಿತಾಧಿಕಾರಿ ಅವಧಿಯನ್ನು ಪುನ: ವಿಸ್ತರಿಸುವಂತೆ ಕೋರಿರುತ್ತಾರೆ. ಸದರಿಯವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ದಿನಾಂಕ:11–02–2006 ರಿಂದ 6 ತಿಂಗಳವರೆಗೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 13 ಮುನೊಸೊ 2006, ಬೆಂಗಳೂರು, ದಿನಾಂಕ:25ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರವೀಂದ್ರನಾಥ ಠಾಗೂರ್ ಇನ್‌ಸ್ಟಿಟ್ಯೂಟ್, ರಾಮಯ್ಯ ಗಾರ್ಡನ್, ಗಣೇಶ ಬ್ಲಾಕ್, ದಿಣ್ಣೂರು ಮುಖ್ಯ ರಸ್ತೆ, ಆರ್.ಟಿ. ನಗರ, ಬೆಂಗಳೂರು–32, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ–27–ಎ ಪ್ರಕಾರ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:11–02–2006 ರಿಂದ 6 ತಿಂಗಳವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ವಿಸ್ತರಣಾ ಅವಧಿಯೊಳಗಾಗಿ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.497

**ವಿಷಯ:** ಬಸವನಗುಡಿ ಉಪ ನೋಂದಣಿ ಕಛೇರಿ ಕಟ್ಟಡದ ಬಾಡಿಗೆ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:**
1. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ/8/94–95, ದಿನಾಂಕ:8.9.2003.
2. ಕಾರ್ಯಪಾಲಕ ಅಭಿಯಂತರರು, ಕಟ್ಟಡಗಳ ವಿಭಾಗ ಇವರ ಪತ್ರಸಂಖ್ಯೆ:ಕವಿ–2:ಜೆಇ–9:2004–05/5339–40, ದಿನಾಂಕ: 27.9.2004.
3. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರಸಂಖ್ಯೆ: ಬಿಎಲ್‌ಡಿ–8/94–95, ದಿನಾಂಕ:31.01.2006 / 10.2.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 8.9.2003 ರ ಪತ್ರದಲ್ಲಿ ಬಸವನಗುಡಿ ಉಪ ನೋಂದಣಿ ಕಛೇರಿ ಕಾರ್ಯ ನಿರ್ವಹಿಸುತ್ತಿರುವ ಕಟ್ಟಡದ ಮಾಲೀಕರು ಕಟ್ಟಡವನ್ನು ತೆರವುಗೊಳಿಸುವಂತೆ ಕೋರಿ ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಹೂಡಿರುವ ಹಿನ್ನೆಲೆಯಲ್ಲಿ ಸದರಿ ಕಛೇರಿಯನ್ನು ಚಾಮರಾಜಪೇಟೆಯ 3ನೇ ಮುಖ್ಯ ರಸ್ತೆಯಲ್ಲಿರುವ ಶ್ರೀ ರಾಮೇಶ್ವರ ದೇವಾಲಯಕ್ಕೆ ಸೇರಿದ 3320 ಚ.ಅ. ವಿಸ್ತೀರ್ಣವುಳ್ಳ (ನೆಲ ಮಹಡಿ ಮತ್ತು ಒಂದನೇ ಮಹಡಿ ಸೇರಿ)ವಾಣಿಜ್ಯ ಸಂಕೀರ್ಣದಲ್ಲಿರುವ ಕಟ್ಟಡಕ್ಕೆ ಬೆಂಗಳೂರು ಮಹಾನಗರ ಪಾಲಿಕೆಯವರು ತಂದಿರುವ ಬಾಡಿಗೆ ಆಧಾರದ ಮೇಲೆ ಚದರ ಅಡಿ ಒಂದಕ್ಕೆ ರೂ.10/– ರಿಂದ 12/– ರಂತೆ ಸಾರ್ವಜನಿಕರ ಹಿತದೃಷ್ಟಿಯಿಂದ ಸ್ಥಳಾಂತರಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

2. ಮೇಲೆ (2) ರಲ್ಲಿ ಓದಲಾದ ದಿನಾಂಕ; 27.9.2004 ರ ಪತ್ರದಲ್ಲಿ ಕಾರ್ಯಪಾಲಕ ಅಭಿಯಂತರರು, ಕಟ್ಟಡಗಳ ವಿಭಾಗ ಇವರು ಸ್ಥಳ ಪರಿಶೀಲನೆ ಮಾಡಿ 3320 ಚ.ಅ. ವಿಸ್ತೀರ್ಣವುಳ್ಳ (ನೆಲ ಮಹಡಿ ಮತ್ತು ಒಂದನೇ ಮಹಡಿ ಸೇರಿ) ಕಟ್ಟಡಕ್ಕೆ ಲೋಕೋಪಯೋಗಿ ಇಲಾಖೆ ಸಂಹಿತೆಯಂತೆ ತಿಂಗಳ ಒಟ್ಟು ಬಾಡಿಗೆ ರೂ. 54,373/– ರೂ.ಗಳಾಗುತ್ತದೆ ಅಂದರೆ ಪ್ರತಿ ಚದರ ಪ್ಲಿಂತ್ ಏರಿಯಾಗೆ 16.40 ರೂ.ಗಳಾಗುತ್ತದೆ ಎಂದು ತಿಳಿಸಿರುತ್ತಾರೆ.

3. ಮೇಲೆ (3) ರಲ್ಲಿ ಓದಲಾದ ದಿನಾಂಕ:31.1.2006 / 10.2.2006 ರ ಪತ್ರದಲ್ಲಿ ವಾಣಿಜ್ಯ ಸಂಕೀರ್ಣವನ್ನು ಕಛೇರಿ ಕೆಲಸದ ಉಪಯೋಗಕ್ಕಾಗಿ ದಿನಾಂಕ:11.12.2003 ರಂದು ಕಛೇರಿಯನ್ನು ಸ್ಥಳಾಂತರಿಸಿರುವುದರಿಂದ ದಿನಾಂಕ:11.12.2003 ರಿಂದ ಜಾರಿಗೆ ಬರುವಂತೆ ಬಾಡಿಗೆ ನಿಗಧಿಪಡಿಸಲು ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 17 ಮುನೋಸ 2003, ಬೆಂಗಳೂರು, ದಿನಾಂಕ:18ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಕಾರಣಗಳ ಹಿನ್ನೆಲೆಯಲ್ಲಿ, ಬಸವನಗುಡಿ ಉಪ ನೋಂದಣಿ ಕಛೇರಿಯು ಕಾರ್ಯನಿರ್ವಹಿಸುತ್ತಿರುವ ಚಾಮರಾಜಪೇಟೆಯ 3ನೇ ಮುಖ್ಯ ರಸ್ತೆಯಲ್ಲಿರುವ ಶ್ರೀ ರಾಮೇಶ್ವರ ದೇವಾಲಯಕ್ಕೆ ಸೇರಿದ ವಾಣಿಜ್ಯ ಸಂಕೀರ್ಣದಲ್ಲಿರುವ 3320 ಚ.ಅ. ವಿಸ್ತೀರ್ಣವುಳ್ಳ (ನೆಲ ಮಹಡಿ ಮತ್ತು ಒಂದನೇ ಮಹಡಿ ಸೇರಿ) ಕಟ್ಟಡಕ್ಕೆ ದಿನಾಂಕ:12.09.2003 ರಿಂದ ತಿಂಗಳ ಒಟ್ಟು ಬಾಡಿಗೆ ರೂ. 54,373/– ರೂ.ಗಳನ್ನು ನಿಗಧಿಪಡಿಸಿ ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 142 ಬಿಆರ್‌ಎಸ್ 2006, ದಿನಾಂಕ: 14.03.2006 ರನ್ವಯ ಲೆಕ್ಕ ಶೀರ್ಷಿಕೆ "2030–ಮುದ್ರಾಂಕ ಮತ್ತು ನೋಂದಣಿ" ಇದರಡಿಯಲ್ಲಿ 202.00 ಲಕ್ಷ ಅನುದಾನವನ್ನು ಮರುಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲಾದ ಮೊತ್ತದಲ್ಲಿ ಭರಿಸುವಂತೆ ಸೂಚಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಮೇಶ್ ಕೆ. ಜಾಗೀರ್‌ದಾರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಅ.ಪ್ರ.)
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.498

**ವಿಷಯ:** ಶ್ರೀ ಹನುಮಾನ ವಿದ್ಯಾವರ್ಧಕ ಸಂಘ, ಕೋರವಾರ, ವಿಜಾಪುರ ಜಿಲ್ಲೆ, ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ:ಕಂಇ 15 ಮುನೊಸೊ 2001, ದಿನಾಂಕ:23–03–2002.
2) ಜಿಲ್ಲಾ ನೋಂದಣಾಧಿಕಾರಿಗಳ ವರದಿ ಸಂಖ್ಯೆ:ಜಿನೋನ/ಎಸ್.ಒ.ಆರ್/51/77–78/159, ದಿನಾಂಕ:29–09–2005.

ಪ್ರಸ್ತಾವನೆ:

ಮೇಲೆ ಓದಲಾದ (1)ರ ಆದೇಶದಲ್ಲಿ ಶ್ರೀ ಹನುಮಾನ ವಿದ್ಯಾವರ್ಧಕ ಸಂಘ ಕೋರವಾರ, ವಿಜಾಪುರ ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲಾಗಿದ್ದು, ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿದೆ. ಓದಲಾದ (2)ರಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು ಪ್ರಸ್ತಾವನೆಸಲ್ಲಿಸಿ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:27234/2000 ಹಾಗೂ 41982/03ರಲ್ಲಿಯ ಆದೇಶದನ್ವಯ ಕ್ರಮ ಜರುಗಿಸಲು ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಕೋರಿದ್ದನ್ನು ಸರಕಾರವು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 40 ಮುನೋಸೊ 2005, ಬೆಂಗಳೂರು, ದಿನಾಂಕ:22ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಹನುಮಾನ ವಿದ್ಯಾವರ್ಧಕ ಸಂಘ, ಕೋರವಾರ ವಿಜಾಪುರ ಜಿಲ್ಲೆ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ನೇಮಕ ಮಾಡಲಾದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:23-12-2004 ರಿಂದ 22-06-2005, 23-06-2005 ರಿಂದ 22-12-2005 ಹಾಗೂ 23-12-2005 ರಿಂದ 22-06-2006ರ ವರೆಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ವಿಸ್ತರಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಸ್ಥೆಯ ಅವ್ಯವಹಾರ ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.499

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜಿನ ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರಾದ ಡಾ: ಹೆಚ್.ಆರ್. ಪದ್ಮಿನಿ ರವರ ವಿರುದ್ಧ ಟ್ರ್ಯಾಪ್ ಪ್ರಕರಣ.

**ಓದಲಾಗಿದೆ:** (1) ದಿನಾಂಕ: 23.12.2004 ಸಂಖ್ಯೆ: ಲೋಕ್ ಐಎನ್‌ವಿ(ಜಿ) ಸಿಟಿಕ್ರೈಂ 22:2000ರ ಅಡಿಷನಲ್ DGP Police Wing ಕರ್ನಾಟಕ ಲೋಕಾಯುಕ್ತರವರ ಪತ್ರ.
(2) ದಿನಾಂಕ: 23.01.2001 ಡಾ: ಹೆಚ್.ಆರ್. ಪದ್ಮಿನಿರವರ ಅರ್ಜಿ.
(3) ದಿನಾಂಕ: 06.02.2001 ಸಂಖ್ಯೆ: ಆಕುಕ 414 ಎಂಎಂಸಿ 2000ರ ಅಧಿಸೂಚನೆ.
(4) ದಿನಾಂಕ: 05.07.2002 ಸಂಖ್ಯೆ: ಆಕುಕ 414 ಎಂಎಂಸಿ 2000ರ ಸರ್ಕಾರಿ ಆದೇಶ.
(5) ದಿನಾಂಕ: 03.04.2003 ಸಂಖ್ಯೆ: ಎಸ್‌ಆರ್‌ಒ (1) 98:02-03ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
(6) ದಿನಾಂಕ: 12.11.2004 ಮತ್ತು 24.12.2005 ಸಂಖ್ಯೆ: ಲೋಕ್:ಐಎನ್‌ವಿ(ಜಿ) ಸಿಟಿಕ್ರೈಂ 22: 2000ರ ಕರ್ನಾಟಕ ಲೋಕಾಯುಕ್ತರವರ ಪತ್ರ.

**ಪೀಠಿಕೆ:**

1. ಬೆಂಗಳೂರಿನ ಮಿಂಟೋ ಪ್ರಾದೇಶಿಕ ನೇತ್ರ ಚಿಕಿತ್ಸಾ ಸಂಸ್ಥೆಯ ವೈದ್ಯಕೀಯ ಅಧೀಕ್ಷಕರಾಗಿದ್ದ ಹಾಗೂ ನೇತ್ರ ಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಡಾ: ಹೆಚ್.ಆರ್. ಪದ್ಮಿನಿ ರವರು ಲೋಕಾಯುಕ್ತರ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿದ್ದರಿಂದ ಉಪಯೋಕಾಯುಕ್ತರ ಶಿಫಾರಸ್ಸಿನ ಮೇರೆಗೆ ದಿನಾಂಕ: 09.02.2001ರ ಅಧಿಸೂಚನೆಯಲ್ಲಿ ಅವರನ್ನು ಅಮಾನತ್ತಿನಲ್ಲಿಟ್ಟು ಅವರ ಲೀನನ್ನು ಮೈಸೂರು ವೈದ್ಯಕೀಯ ಕಾಲೇಜಿಗೆ ಸ್ಥಳಾಂತರಿಸಲಾಗಿತ್ತು. ಅವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಬೆಂಗಳೂರಿನ ವಿಶೇಷ ನ್ಯಾಯಾಲಯದಲ್ಲಿ ದಿನಾಂಕ: 30.09.2002ರಂದು ಸಲ್ಲಿಸಲಾಗಿತ್ತು.

2. ದಿನಾಂಕ: 24.12.2005 ಸಂಖ್ಯೆ: ಲೋಕ್:ಐಎನ್‌ವಿ(ಜಿ) ಸಿಟಿಕ್ರೈಂ 22: 2000ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಯ ಹೆಚ್ಚುವರಿ ಮಹಾನಿರ್ದೇಶಕರು ಡಾ: ಹೆಚ್.ಆರ್. ಪದ್ಮಿನಿ, ಹಿಂದಿನ ಅಧೀಕ್ಷಕರು, ಮಿಂಟೋ ಕಣ್ಣಿನ ಆಸ್ಪತ್ರೆ ಬೆಂಗಳೂರು ಇವರ ವಿರುದ್ಧ ದಾಖಲಾಗಿರುವ ಲಂಚಪ್ರಕರಣಕ್ಕೆ ಸಂಬಂಧಿಸಿದಂತೆ ವಿಶೇಷ ನ್ಯಾಯಾಧೀಶರು, ನ್ಯಾಯಾಲಯ ವಿಶೇಷ ಸಂಖ್ಯೆ: 493: 2002ರಲ್ಲಿ ಡಾ: ಹೆಚ್.ಆರ್. ಪದ್ಮಿನಿಯವರನ್ನು ಆಪಾದನೆಗಳಿಂದ ದೋಷಮುಕ್ತಗೊಳಿಸಿ ಹೊರಡಿಸಿರುವ ಆದೇಶ ದಿನಾಂಕ: 31.05.2004ರ ವಿರುದ್ಧ ಕರ್ನಾಟಕದ ಮಾನ್ಯ ಉಚ್ಛನ್ಯಾಯಾಲಯದಲ್ಲಿ ಮೇಲ್ಮನವಿಯನ್ನು ಸಲಿಸಲು ಪ್ರಕರಣವು ಅರ್ಹವಾಗಿರುವುದಿಲ್ಲವೆಂಬ ನಿರ್ಣಯವನ್ನು ದಿನಾಂಕ: 08.12.2005 ಸಂಖ್ಯೆ: ಹೆಚ್.ಡಿ 4753: ಹೆಚ್‌ಸಿಪಿ:2: 05ರ ಸರ್ಕಾರದ ಆದೇಶದಲ್ಲಿ ಕೈಗೊಳ್ಳಲಾಗಿದೆ ಎಂದು ತಿಳಿಸಿರುತ್ತಾರೆ. ಆದ್ದರಿಂದ ಡಾ: ಹೆಚ್.ಆರ್. ಪದ್ಮಿನಿರವರ ವಿರುದ್ಧ ದಾಖಲಾಗಿರುವ ಕ್ರಿಮಿನಲ್ ಮೊಕದ್ದಮೆ ಮುಕ್ತಾಯಗೊಂಡಿದೆ ಎಂದು ತಿಳಿಸಿರುತ್ತಾರೆ.

3. ಈ ಪ್ರಕರಣದ ಹಿನ್ನೆಲೆಯಲ್ಲಿ ವಿಶೇಷ ನ್ಯಾಯಾಧೀಶರು ಅವರನ್ನು ದೋಷಮುಕ್ತರೆಂದು ಪರಿಗಣಿಸಿದ್ದು, ಸದರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಲ್ಲವೆಂದು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಡಾ: ಹೆಚ್.ಅರ್. ಪದ್ಮಿನಿ ಹಿಂದಿನ ಅಧೀಕ್ಷಕರು, ಮಿಂಟೋ ಕಣ್ಣಿನ ಆಸ್ಪತ್ರೆ ಇವರನ್ನು ಆಪಾದನೆಗಳಿಂದ ದೋಷಮುಕ್ತಗೊಳಿಸಬಹುದು ಆದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 54 ಎಂಎಂಸಿ 2004, ದಿನಾಂಕ:28ನೇ ಫೆಬ್ರವರಿ, 2006**

4. ಮೈಸೂರು ವೈದ್ಯಕೀಯ ಕಾಲೇಜಿನ ನಿವೃತ್ತ ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರಾದ ಡಾ: ಹೆಚ್.ಆರ್. ಪದ್ಮಿನಿ ರವರನ್ನು ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಬಿ. ಗಣಾಚಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್.504

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಸುವರ್ಣ ಕರ್ನಾಟಕ ಆಚರಣೆಯ ಸಂಬಂಧ ಪ್ರಮುಖ ರಾಜಮನೆತನಗಳಿಗೆ ಸೇರಿದ ಪ್ರಾಚೀನ ಸ್ಮಾರಕಗಳ ಸಂರಕ್ಷಣೆ ಅನುದಾನ ಬಿಡುಗಡೆ-ಪರ್ಸನಲ್ ಡಿಪಾಸಿಟ್ ಅಕೌಂಟ್ ಖಾತೆ ಆರಂಭಿಸುವ ಬಗ್ಗೆ.

**ಓದಲಾಗಿದೆ:** (1) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರ ಪತ್ರ ಸಂಖ್ಯೆ: ಡಿಎಎಂ: ಸಂವಿ: ಸು.ಕ: 2005-06 ದಿನಾಂಕ: 03.03.2006.

(2) ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಆಇ 63 ಟಿಎಆರ್ 2005 ದಿನಾಂಕ: 17.03.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರು ಸರ್ಕಾರದ ಆದೇಶ ಸಂಖ್ಯೆ: ಸಂಕಇ 109 ಕರಅ 2005 ದಿನಾಂಕ: 01.03.2006ರಲ್ಲಿ ಸುವರ್ಣ ಕರ್ನಾಟಕ ಯೋಜನೆಯಡಿ ಪ್ರಮುಖ ರಾಜಮನೆತನಗಳ 10 ಸ್ಮಾರಕಗಳನ್ನು ಸಂರಕ್ಷಿಸುವ ಸಲುವಾಗಿ ರೂ.50.00 ಲಕ್ಷಗಳ ಅನುದಾನವನ್ನು ಲೆಕ್ಕಶೀರ್ಷಿಕೆ 2205-00-102-4-09-059 (ಯೋಜನೆ)ಯಡಿ ಬಿಡುಗಡೆ ಮಾಡಿದ್ದು, ಈ ಸ್ಮಾರಕಗಳ ಸಂರಕ್ಷಣಾ ಕಾಮಗಾರಿಗಳನ್ನು ಟೆಂಡರ್ ಕರೆಯಲು ಈಗಾಗಲೇ ಇಲಾಖೆಯು ಸೂಕ್ತ ಕ್ರಮ ಕೈಗೊಂಡಿರುತ್ತದೆ. 2005-06ನೇ ಸಾಲಿನ ಆರ್ಥಿಕ ವರ್ಷ ಅಂತ್ಯಗೊಳ್ಳುತ್ತಿರುವುದರಿಂದ ಬಿಡುಗಡೆ ಮಾಡಿದ ಅನುದಾನವನ್ನು ಬಳಸಿಕೊಳ್ಳಲು ಸಾಧ್ಯವಾಗುವುದಿಲ್ಲವಾಗಿ ಪರ್ಸನಲ್ ಡಿಪಾಸಿಟ್ ಅಕೌಂಟ್ ಖಾತೆಯನ್ನು ಜಿಲ್ಲಾ ಖಜಾನೆ, ಮೈಸೂರು, ಇಲ್ಲಿ ಆರಂಭಿಸಿ ಠೇವಣಿ ಇಡಲು ಉದ್ದೇಶಿಸಿದ್ದು, ಕರ್ನಾಟಕ ಆರ್ಥಿಕ ಸಂಹಿತೆ ಪರಿಚ್ಛೇದ 1ಎ ಅಡಿ ಪರ್ಸನಲ್ ಡಿಪಾಸಿಟ್ ಅಕೌಂಟ್ ಆರಂಭಿಸಲು ಹಾಗೂ ಕೆಎಫ್‌ಸಿ ಪರಿಚ್ಛೇದ 286ರ ಅಡಿ ಮಹಾಲೇಖಪಾಲಕರು ಕರ್ನಾಟಕ ಇವರಿಂದ ಅಥರೈಸೇಷನ್ ಪಡೆಯಲು ಆದೇಶ ನೀಡುವಂತೆ ಕೋರಿದ್ದಾರೆ. ಈ ಒಳಗಾಗಿ ಆರ್ಥಿಕ ಇಲಾಖೆಯು ಓದಲಾದ ಉಲ್ಲೇಖ (2)ರಲ್ಲಿ ಆದೇಶವನ್ನು ಹೊರಡಿಸಿ ಮೈಸೂರಿನ ಜಿಲ್ಲಾ ಖಜಾನೆಯಲ್ಲಿ ವೈಯಕ್ತಿಕ ಠೇವಣಿ ಖಾತೆಯ ವ್ಯವಹಾರಗಳನ್ನು ಲೆಕ್ಕಶೀರ್ಷಿಕೆ 8443-00-106-3-18ರಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶಕರ ಹೆಸರಿನಲ್ಲಿ ಇದನ್ನು ನಿರ್ವಹಿಸಲು ಸೂಚಿಸಲಾಗಿದೆ. ಹಾಗೂ ಮೈಸೂರಿನ ಜಿಲ್ಲಾ ಖಜಾನೆಯಲ್ಲಿ ಹೊಸ ವೈಯಕ್ತಿಕ ಠೇವಣಿ ಖಾತೆ ತೆರೆದ ನಂತರ ಹೊಸಪೇಟೆ ಉಪ ಖಜಾನೆಯಲ್ಲಿರುವ ವೈಯಕ್ತಿಕ ಠೇವಣಿ ಖಾತೆ ಸಂಖ್ಯೆ: 04000001ನ್ನು ಮುಕ್ತಾಯಗೊಳಿಸಲು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶಕರಿಗೆ ಸೂಚಿಸಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 52 ಕರಅ 2006, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸುವರ್ಣ ಕರ್ನಾಟಕ ಯೋಜನೆಯಡಿ ಪ್ರಮುಖ ರಾಜಮನೆತನಗಳ 10 ಸ್ಮಾರಕಗಳನ್ನು ಸಂರಕ್ಷಿಸುವ ಸಲುವಾಗಿ ಲೆಕ್ಕಶೀರ್ಷಿಕೆ 2205-00-102-4-09-059 (ಯೋಜನೆ) ಅಡಿಯಲ್ಲಿ ಬಿಡುಗಡೆಗೊಳಿಸಿದ ರೂ.50.00 ಲಕ್ಷಗಳ ಅನುದಾನವನ್ನು ಈಗಾಗಲೇ ಆರ್ಥಿಕ ಇಲಾಖೆಯು ದಿನಾಂಕ: 17.03.2006ರ ಆದೇಶದಲ್ಲಿ ಅನುಮತಿ ನೀಡಿದಂತೆ ವೈಯಕ್ತಿಕ ಠೇವಣಿಯ ಖಾತೆಯ ಲೆಕ್ಕಶೀರ್ಷಿಕೆ 8443-00-106-3-18ರಲ್ಲಿ ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರು ಠೇವಣಿ ಇಡಲು ಸೂಚಿಸಿದೆ. ಹಾಗೂ ಸದರಿ ಅಕೌಂಟ್ ಆರು ತಿಂಗಳವರೆಗೆ ಮಾತ್ರ ಇದ್ದು, ಈ ಅವಧಿಯಲ್ಲಿಯೇ ಇಲಾಖೆಯು ಈ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದೆಂದು ಸಹ ಸೂಚಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 424 ವೆಚ್ಚ-5/2006 ದಿನಾಂಕ: 28.03.2006ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್.506

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## INFRASTRUCTURE DEVELOPMENT SECRETARIAT

**Sub:** Release of last and final instalment of Government of Karnataka's 50% share of the cost of Sholapur-Gadag Railway guage conversion project-reg.

**Read:** (1) G.O. No. IDD 1 NSW 03, Dated: 03.03.2003.

(2) G.O. No. IDD 1 NSW 03, Dated: 29.03.2003.

(3) G.O. No. IDD 40 NSW 03, Dated: 16.09.2003.

(4) G.O. No. IDD 95 NSW 03, Dated: 22.01.2004.

(5) G.O. No. IDD 42 NSW 2004, Dated: 16.06.2004.

(6) G.O. No. IDD 21 NSW 05, Dated: 22.02.2005.

(7) G.O. No. IDD 21 NSW 05, Dated: 29.03.2005.

(8) G.O. No. IDD 42 NSW 04(p), Dated: 22.07.2005.

(9) Proceedings of a meeting held under the chairmanship of Chief Secretary to Government of Karnataka on 18.08.2005.

(10) G.O. No. IDD 42 NSW 04(p), Dated: 15.10.2005.

(11) G.O. No.FD 205 BRS 2006 Dated: 27.03.2006.

(12) G.O. No. FD 206 BRS 2006, Dated: 27.03.2006.

**Preamble:**

1. In the Government orders read at Sl.No. (1) to (8) above the Government of Karnataka have released Rs.52,70,00,000-00 (Rupees Fifty Two crores and Seventy Lakhs) only out of Rs.89,36,00,000-00 (Rupees Eighty Nine crores and Thirty Six lakhs) towards its matching contribution of 50% of the cost of construction of Sholapur-Gadag guage conversion project. In the meeting held on 18.08.2005 (read at Sl.No. 9 above) under the Chairmanship of Chief Secretary to Government of Karnataka, it was decided to disburse the entire balance amount of Rs.36.66 crores of Government of Karnataka's part of the sharable cost for this project within this financial year 2005-06.

2. In Govt. Order Dated: 22.07.2005 read at Sl.No. (10) above, Government of Karnataka have released Rs.16,30,00,000/- (Rupees Sixteen Crores and Thirty Lakhs) only to Sholapur-Gadag Railway guage conversion project and a balance of Rs.20.36 crores only will have to be released during current financial year towards the total sharable cost of the Government of Karnataka towards this project.

3. During the current year, no balance in the budget allocation is available for this project. On the request of Infrastructure Development Department, the Finance Department in its order Dated: 27.03.2006 referred to at Sl.No. (12) above have agreed for sanctioning of Rs.20.36 crores (Rs. 11.36 crores by way of reappropriation (Rs. 9.00 crores additionality) under the head of account "5465-01-190-3-03-(p)211 investment-Sholapur-Gadag guage conversion project provided in supplementary estimate final 2005-06". Hence this order.

**G.O. No. IDD 63 IDM 05, Bangalore, Dated: 28th March, 2006**

After careful examination of the above, Government sanction is accorded for release of Rs.20,36,00,000-00 crores (Rupees Twenty crores Thirty Six lakhs) only towards the last and final instalment of State Government's sharable cost of 50% for construction of Sholapur-Gadag guage conversion railway project by the following means:

I. Release of Rs.9,00,00,000-00 crores (Rupees Nine crores) only out of the additional allocation for this project from the head of account "5465-01-190-3-03-(p) 211 investment-Sholapur-Gadag guage conversion project provided in supplementary estimate final 2005-06".

II. Release of Rs.11,36,00,000-00 crores (Rupees eleven crores thirtysix lakhs) only by reappropriation from the head of account "5465-01-190-2-04-(P)211 Investment" of Rs.11,00,00,000-00 (Rupees Eleven crores) and from the head of account 5465-01-190-2-01 (P)-211- Investment of Rs.36,00,000 (Rupees Thirty Six lakhs) to the head of account "5465-01-190-3-03-211-Gadag- Sholapur gauge conversion project-Investment (Plan)".

2. The Chief Finance Officer of iDeCK is authorized to draw the amount through a payee's receipt duly countersigned by the Under Secretary to Government, Infrastructure Development Department and iDeCK shall in turn deposit the same with the Financial Adviser and Chief Accounts Officer (Construction), South Western Railway, Bangalore.

3. The Chief Engineer (Construction), South Western Railway shall arrange to furnish monthly expenditure statement to the Infrastucture Development Department by 5th of the succeeding month.

4. This order issues with the concurrence of Finance Department vide its U.O.. Note No. FD 209 Exp-1/05 Dated: 24.03.2006 and G.O. Nos. (1) FD 205 BRS 2006 Dated: 27.03.2006, and (2) No. FD 206 BRS 2006, Dated: 27.03.2006.

5. The cut off date for presentation of bills issued vide Govt. Order No. FD 2 BPE 2006 Dated: 21.01.2006 is extended upto 29.03.2006 in respect of this release.

By Order and in the name of Governor of Karnataka,
**T.B. RENUKAPRASAD**
Under Secretary to Government,
Infrastructure Development Department.

**CORRIGENDUM**

**No. IDD 63 IDM 2005, Bangalore, Dated: 29th March, 2006**

The following para is inserted in place of para 1 (I & II) of Government Order No. IDD 63 IDM 2005 Dated: 28.03.2006.

"Release of Rs.9,00,00,000/- (Rupees Nine Crores) only out of the additional allocation provided in the supplementary estimates final 2005-06 and Rs.11,00,00,000/- (Rupees Eleven crores) and Rs.36,00,000 (Rupees Thirty Six lakhs) only by way of reappropriation from the head of account "5465-01-190-2-04 (P)-211 Investments" and "5465-01-190-2-01-211 (P)" respectively to the head of account "5465-01-190-3-03(P)-211- Investments", totaling Rs.20,36,00,000/- (Rupees Twenty crores and thirty Six lakhs) to meet the expenditure towards the cost of construction of Sholapur-Gadag gauge conversion project".

By Order and in the name of Governor of Karnataka,
**T.B. RENUKAPRASAD**
Under Secretary to Government,
Infrastructure Development Department.

PR-508

## URBAN DEVELOPMENT SECRETARIAT

## CORRIGENDUM

**No. UDD 107 AHD 2005, Bangalore, Dated: 21st March, 2006**

In Government Order No. UDD 98 AHD 2004 Dated: 30.05.2005:

(1) The words and figures "Section 21" appearing in para 3 of the preamble portion of the Government Order shall be substituted by the words and figures" section 20(1)".

(2) For the item (a) under paragraph "1" of the order portion the following shall be substituted:

"(a) The audit menthodology and procedures for audit of Urban Local Bodies by the Auditor/ Controller of State Accounts will be worked in consultation with Principal AG (Civil and Commercial Audit) and such audit methodology and procedures shall be in accordance with best national and international practices".

(3) For the Item (e) under paragraph 1 of the order portion the following shall be substituted:

"(e) Principal AG (Civil) and Commercial Audit) would conduct test check of some of the Urban Local Bodies audited by the Auditor/ Controller of State Accounts on a select basis and percentage basis, and the percentage of the test checks to be conducted shall be decided by the Principal AG in consultation with the Controller, State Accounts Department."

(4) The words "be sought" appearing in item (i) of Paragraph-1 of the order portion, shall be substituted by the words" be given".

By Order and in the name of Governor of Karnataka,

**S.J. SAMPATHKUMAR**

Under Secretary to Government,

Urban Development Department.

PR-510

## ENERGY SECRETARIAT

**Subject:** Karnataka Electricity Regulatory Commission- Release of Fourth Quarter Fund to KERC out of the provision made in the Budget Estimates for the year 2005-06.- Orders reg.

**Read:** Letter No. F/04/3/354 Dated: 01.03.2006.

**Preamble:**

A sum of Rs.206.00 lakhs has been provided in the Budget estimates for the year 2005-06 under the Head of Account 2801-80-101-1-07-KERC-101 GIA (Non-Plan). In the letter Dated: 07.10.2005 read above, Secretary, KERC has requested to recoup the Permanent Imprest by releasing Rs.26.57 lakhs to meet the expenditures in the Fourth quarter of the year 2005-06 (based on actual expenditure) in order to maintain the balance of Rs. 75.00 lakhs in the Permanent Imprest Account sanctioned vide G.O. Dated: 19.10.2002. Hence, this order.

**Government Order No. EN 67 PSR 2005, Bangalore, Dated: 31st March, 2006**

In the circumstances explained in the preamble, Government are pleased to release, the amount of Rs.26.57 lakhs (Rupees Twenty Six Lakhs Fifty Seven Thousand Only) based on the actual expenditure incurred by the Karnataka Electricity Regulatory Commission (KERC) Under the Head of Account "2801-80-101-1-07-KERC-101-GIA (Non-Plan)" to meet the expenditure for the Fourth (IV) Quarter of the year 2005-06 and to maintain the balance of Rs.75.00 lakhs in the Permanent Imprest Account.

The Principal Secretary to Government, Energy Department is authorised to coountersign the bill and to draw and disburse the amount to KERC on the payee's receipt signed and submitted by the Secretary, KERC.

This Order issued with the concurrence of the Finance Department vide their U.O. Note No. FD/2162/Exp-I/ 2005 Dated: 31.03.2006.

By Order and in the name of Governor of Karnataka,

**SURESH B. KRISHNAPPANAVAR**

Under Secretary to Government,

Energy Department.

PR-511

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಬಾಗಲಕೋಟೆ ಕಂದಾಯ ತಾಲ್ಲೂಕಿನ ನಿಧನದಿಂದ ತೆರವಾದ ಎರಡು ನೋಟರಿ ಹುದ್ದೆಗಳನ್ನು ತುಂಬುವ ಕುರಿತು.

**ಓದಲಾಗಿದೆ:** (1) ಸರ್ಕಾರಿ ಪತ್ರ ಸಂಖ್ಯೆ: ಲಾ 69 ಎಲ್‌ಸಿಎಲ್ 04 ದಿನಾಂಕ: 15.11.2005.

(2) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ, ಇವರ ಪತ್ರ ಸಂಖ್ಯೆ: ಆಡಳಿತ 12/2006 ದಿನಾಂಕ: 03.01.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 15.11.2005ರ ಪತ್ರದಲ್ಲಿ ಶ್ರೀ ಜಿ.ಎನ್. ರುದ್ರಪ್ಪ ಮತ್ತು ಶ್ರೀ ಮಲ್ಲಿನಾಥ್ ಕರಿಬಸವಯ್ಯ, ಬಳ್ಳೂರ ಮಠ, ನೋಟರಿಗಳು, ಬಾಗಲಕೋಟೆ, ಇವರುಗಳ ನಿಧನದಿಂದ ತೆರವಾದ ನೋಟರಿ ಹುದ್ದೆಯ ಭರ್ತಿಗಾಗಿ ಅರ್ಜಿಗಳನ್ನು ಆಹ್ವಾನಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರನ್ನು ಕೋರಲಾಗಿತ್ತು. ಆ ಮೇರೆಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 03.01.2006ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 69 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ:28ನೇ ಮಾರ್ಚ್, 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ (1) ಶ್ರೀ ಸುರೇಶ ಸಂಗಪ್ಪ ರೇವಡಿಗಾರ, ವಕೀಲರು, ಸೇಂಟ್ ಆನ್‌ಲೈನ್ಸ್ ಶಾಲೆಯ ಹತ್ತಿರ, ವಾರ್ಡ್, ನಂ.10, ಬಾಗಲಕೋಟೆ ಮತ್ತು (2) ಶ್ರೀ ವೀರೇಶ್ವರ ಬಸವಂತಯ್ಯ ಚೌಕಿಮಠ, ವಕೀಲರು, ವಿನಾಯಕ ನಗರ, 3ನೇ ಕ್ರಾಸ್, ಎಕ್ಸ್‌ಟೆನ್‌ಷನ್ ಏರಿಯಾ, ಬಾಗಲಕೋಟೆ ಇವರುಗಳನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬಾಗಲಕೋಟೆ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರುಗಳು ಲೆಕ್ಕ ಶೀರ್ಷಿಕೆ 0070- ಇತರೆ ಆಡಳಿತಾತ್ಮಕ ಸೇವೆಗಳು-01- ನ್ಯಾಯ ಪರಿಪಾಲನೆ-501-0- ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರುಗಳ ಹೆಸರುಗಳನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್.512

## ಇಂಧನ ಸಚಿವಾಲಯ

**ವಿಷಯ:** ಶಂಬೂರಿ ಕಿರು ಜಲ ವಿದ್ಯುತ್ ಯೋಜನೆ ವರ್ಗಾವಣೆ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ: ಇಂಇ 227 ಎನ್‌ಸಿಇ 2005, ದಿನಾಂಕ: 19.08.2005.

(2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ ಶಂಬೂರಿ/ 2005/ 650, ದಿನಾಂಕ: 10/22.03.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆಸರ್ಸ್ ಶ್ರೀ ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಶಂಬೂರಿ/ ಪರ್ಲಾ ಬಳಿ ನೇತ್ರಾವರಿ ನದಿಯ ಎಡದಂಡೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಶಂಬೂರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಸದರಿ ಯೋಜನೆಯನ್ನು ಮೆ: ರಿತ್ವಿಕ್ ಎನರ್ಜಿ ಜನರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ವರ್ಗಾಯಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಮೆ: ಶ್ರೀ ಮಾರುತಿ ಪವರ್ ಜೆನ್ (ಇಂಡಿಯ) ಪ್ರೈವೇಟ್ ಲಿಮಿಟೆಡ್ ಕಂಪನಿಯ ನಿರ್ದೇಶಕರುಗಳೇ ಮೆ: ರಿತ್ವಿಕ್ ಎನರ್ಜಿ ಜನರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಯಲ್ಲೂ ನಿರ್ದೇಶಕರಾಗಿರುತ್ತಾರೆ ಎಂದು ತಿಳಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 163 ಎನ್‌ಸಿಇ 2006, ಬೆಂಗಳೂರು, ದಿನಾಂಕ:31ನೇ ಮಾರ್ಚ್, 2006**

ಮೆ: ಶ್ರೀ ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಶಂಬೂರಿ/ ಪರ್ಲಾ ಬಳಿ ನೇತ್ರಾವತಿ ನದಿಯ ಎಡದಂಡೆಯಲ್ಲಿ ಹಂಚಿಕೆಯಾಗಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಶಂಬೂರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ: ರಿತ್ವಿಕ್ ಎನರ್ಜಿ ಜನರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಅನುಮತಿ ನೀಡಿ ವರ್ಗಾಯಿಸಲಾಗಿದೆ.

ಓದಲಾದ (1)ರ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್.513

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶ್ರೀ ಎಸ್. ಜಯರಾಮೇಗೌಢ, ವಕೀಲರು, ಇವರನ್ನು ಪಾಂಡವಪುರ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ:** (1) ಸರ್ಕಾರಿ ಪತ್ರ ಸಂಖ್ಯೆ: ಲಾ 75 ಎಲ್‌ಸಿಎಲ್ 05 ದಿನಾಂಕ: 15.04.2005.

(2) ಪತ್ರ Misc.To.No.382/2006 ದಿನಾಂಕ: 17.01.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 15.04.2005ರ ಸರ್ಕಾರದ ಪತ್ರದಲ್ಲಿ ಶ್ರೀ ಎಂ.ವಿ. ನಾರಾಯಣಸ್ವಾಮಿ, ನೋಟರಿ, ಪಾಂಡವಪುರ, ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಯ ಭರ್ತಿಗಾಗಿ ಅರ್ಜಿಗಳನ್ನು ಆಹ್ವಾನಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರನ್ನು ಕೋರಲಾಗಿತ್ತು. ಆ ಮೇರೆಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ:17.01.2006ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 75 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ:26ನೇ ಮಾರ್ಚ್, 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎಸ್. ಜಯರಾಮೇಗೌಡ, ವಕೀಲರು, ಬಿನ್ ಲೇಟ್ ಸಿದ್ದೇಗೌಡ, ಅರಳಕುಪ್ಪೆ ವಿಲೇಜ್ ಪಾಂಡವಪುರ, ಮಂಡ್ಯ ಜಿಲ್ಲೆ, ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಪಾಂಡವಪುರ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070- ಇತರೆ ಆಡಳಿತಾತ್ಮಕ ಸೇವೆಗಳು-01- ನ್ಯಾಯ ಪರಿಪಾಲನೆ-501-0- ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರುಗಳ ಹೆಸರುಗಳನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್.514

## ಇಂಧನ ಸಚಿವಾಲಯ

**ವಿಷಯ:** ಅನಧಿಕೃತ ಪಂಪ್ ಸೆಟ್‌ಗಳ ಸಕ್ರಮೀಕರಣ ಕಾಲವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಪಿಎಸ್‌ಆರ್ 2004, ದಿನಾಂಕ:15.03.2005.

(2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಪಿಎಸ್‌ಆರ್ 2004, ದಿನಾಂಕ:02.05.2005.

(3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಪಿಎಸ್‌ಆರ್ 2004, ದಿನಾಂಕ:23.05.2005.

(4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಪಿಎಸ್‌ಆರ್ 2004(ಪಿ), ದಿನಾಂಕ:07.07.2005.

(5) ಕೆ.ಪಿ.ಟಿ.ಸಿ.ಎಲ್. ಪತ್ರದ ಸಂಖ್ಯೆ: ಕೆ.ಪಿ.ಟಿ.ಸಿ.ಎಲ್./ಬಿ72/ 5452/ 2005-06, ದಿನಾಂಕ: 03.03.2006.

**ಪ್ರಸ್ತಾವನೆ:**

ಮೇಲೆ ಓದಲಾದ (5)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕೆ.ಪಿ.ಟಿ.ಸಿ.ಎಲ್. ರವರು ಸ್ಥಳೀಯ ಮುಖಂಡರ ಒತ್ತಾಯದ ಹಿನ್ನಲೆಯಲ್ಲಿ ಅನಧಿಕೃತ ಪಂಪ್ ಸೆಟ್‌ಗಳ ಸಕ್ರಮೀಕರಣ ಕಾಲವಕಾಶವನ್ನು ಓದಲಾದ 4ರ ಆದೇಶದಲ್ಲಿ 31.08.2005 ರವರೆಗೆ ಮಾತ್ರವಿದ್ದು ಇನ್ನು ಹಲವಾರು ರೈತರ ಈ ಉಪಯೋಗದಿಂದ ವಂಚಿತರಾಗಿದ್ದರಿಂದ ಅವರಿಗೆ ಈ ಕಾಲಾವಕಾಶವನ್ನು ಸದುಪಯೋಗಪಡಿಸಿಕೊಳ್ಳುವ ನಿಟ್ಟಿನಲ್ಲಿ 01.09.2005 ರಿಂದ 31.07.2006 ರವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ. ಸರ್ಕಾರವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 144 ಪಿಎಸ್‌ಆರ್ 2004(ಪಿ1), ಬೆಂಗಳೂರು, ದಿನಾಂಕ:29ನೇ ಮಾರ್ಚ್, 2006**

ರಾಜ್ಯದಲ್ಲಿರುವ ಅನಧಿಕೃತ ಪಂಪ್ ಸೆಟ್‌ಗಳ ಸಕ್ರಮೀಕರಣದ ಕಾಲಾವಕಾಶವನ್ನು ದಿನಾಂಕ: 01.09.2005ರಿಂದ 31.07.2006 ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್.517

## COMMERCE AND INDUSTRIES SECRETARIAT

**Subject:** Conversion of Purchase Tax on Sugarcane into Interest free Loan-Reg.

**Read:** 1. Government Order No.CI/140/FMI/71 Dated: 06.06.1973.

2. Letter No. RFD/ CR-19/05-06 Dated: 08.03.2006 & 23.03.2006 from Commissioner of Commercial Taxes, Bangalore.

**Preamble:**

In the Government order read at Sl.No. 1 above, sanction has been accorded for conversion of purchase tax dues from sugar factories into interest free loan and it shall be recovered over a period of five years, after the expirty of the first ten years (concessional period) in equal annual installments to be paid before 30th September each year.

The Commissioner of Commercial Taxes in his letters read at (2) above, has sent the proposal for providing a sum of Rs. 410.15 Lakhs (Rupees Foud hundred ten lakhs & fifteen thousand only) for conversion of purchase tax on sugarcane into interest free loan in respect of the following 6 sugar factories.

**(Rs.in Lakhs)**

| Sl. No. | Name of the Societies | Year | Private | Co-operative |
|---|---|---|---|---|
| 1. | M/s Raitara Sahakari Sakkare Kharkhane, Mudhola | 2004-05 | - | 73.09 |
| 2. | M/s. Bannari Amman Sugar Ltd., Nanjanagud. | 2004-05 | 21.43 | - |
| 3. | M/s. Jamakhandi Sugars, Jamakhandi | 2004-05 | 153.25 | - |
| 4. | M/s. Nirani Sugar Ltd., Mudhola | 2004-05 | 3.72 | - |
| 5. | M/s. Shamanur Sugars Ltd., Davanagere. | 2004-05 | 85.79 | - |
| 6. | M/s Athani Farmers Sugar Factory Ltd., | 2004-05 | 72.87 | - |
| **Total** | | | **337.06** | **73.09** |

The Proposal has been examined in detail. Hence, the following order.

**Government Order No. CI 58 SGF 2006, Dated: 31st March, 2006**

Government are pleased to accord sanction and release a sum of Rs.410.15 Lakhs (Rupees Four hundred ten lakhs & fifteen thousand only) for payment of purchase tax dues as loan to the following 6 sugar factories subject to the condition that the said release is by way of book adjustment not involving out go of cash, by debiting a sum of Rs.73.09 Lakhs (Rupees Seventy three lakhs and nine thousand Only) in respect of one Co-operative sugar factory and a sum of Rs.337.06 lakhs (Rupees three hundred thirty seven lakhs and six thousand only) in respect of five private sugar factories under the head of account 6860-04-190-1-16(P)-394 subsidiaries and equal amount shall be taken as receipt under the head of account 0040-00-102-0-01 Sales Tax by Contra entry as receipts from the concerned sugar factories towards purcahse tax on sugarcane. This is only a book adjustment and no cash out go involved. As no provision is made in the budget 2005-06 for the purpose, the reqired amount has been provided in the supplementary estimates 2005-06 (Final installment).

**(Rs.in Lakhs)**

| Sl. No. | Name of the Sugar Factory | Year | Private | Co-operative |
|---|---|---|---|---|
| 1. | M/s Raitara Sahakari Sakkare Kharkhane, Mudhola | 2004-05 | - | 73.09 |
| 2. | M/s. Bannari Amman Sugar Ltd., Nanjanagud. | 2004-05 | 21.43 | - |
| 3. | M/s. Jamakhandi Sugars, Jamakhandi | 2004-05 | 153.25 | - |
| 4. | M/s. Nirani Sugar Ltd., Mudhola | 2004-05 | 3.72 | - |
| 5. | M/s. Shamanur Sugars Ltd., Davanagere. | 2004-05 | 85.79 | - |
| 6. | M/s Athani Farmers Sugar Factory Ltd., | 2004-05 | 72.87 | - |
| **Total** | | | **337.06** | **73.09** |

The Accountant General, Bangalore is requested to carry out necessary adjustments as indicated above in the books of accounts for 2005-2006.

This order issued with the concurrence of the Finance Department vide its U.O. Note No.FD/699/EXP-I/2006 Dated:29.03.2006.

By Order and in the name of Governor of Karnataka,
**A. ANANDA kUMAR**
Desk Officer (Sugar),
Commerce & Industries Department.

PR-518

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯದಿಂದ ತೆರವುಗೊಳಿಸಿದ ನಂತರ ಜನರ ಪುನರ್ವಸತಿ ಕಲ್ಪಿಸಲು ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಅಪಜೀ 56 ಎಫ್‌ಜಿಎಲ್ 2005 ದಿನಾಂಕ: 16.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16.12.2005ರ ಆದೇಶದಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿನ ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯ ಪ್ರದೇಶದಿಂದ ತೆರವುಗೊಳಿಸಿದ ಜನರಿಗೆ ಪುನರ್ವಸತಿ ಕಲ್ಪಿಸುವ ಕುರಿತು ಈ ಕೆಳಗಿನಂತೆ 329 ಕುಟುಂಬಗಳಿಗೆ ರೂ.504.9 ಲಕ್ಷಗಳನ್ನು ವೆಚ್ಚದಲ್ಲಿ (ಸರಗೋಡಿನಲ್ಲಿರುವ ಜನರಿಗೆ ಪುನರ್ವಸತಿ ಕಲ್ಪಿಸಲು ರೂ.357.7 ಲಕ್ಷಗಳು ಹಾಗೂ ಮಸ್ಕಲಿ ಜನರಿಗೆ ಪುನರ್ವಸತಿ ಕಲ್ಪಿಸಲು ರೂ.147.2 ಲಕ್ಷಗಳು) ಪುನರ್ವಸತಿ ಪ್ಯಾಕೇಜನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಿದೆ.

ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯದಿಂದ ತೆರವುಗೊಳಿಸಿದ ಜನರಿಗೆ ಪುನರ್ವಸತಿ ಪ್ಯಾಕೇಜಿಗೆ ಸಂಬಂಧಿಸಿದಂತೆ ಪ್ರಸಕ್ತ ಸಾಲಿನ ಪೂರಕ ಅಂದಾಜುಗಳ 3ನೇ ಕಂತಿನಲ್ಲಿ ಲೆಕ್ಕ ಶೀರ್ಷಿಕೆ 2406-01-800-0-08-059 ಅಡಿಯಲ್ಲಿ ರೂ.5.00 ಕೋಟಿಗಳನ್ನು ಸೇರಿಸಿ ಒದಗಿಸಲು ಮತ್ತು ಈ ಮೊತ್ತವನ್ನು ಪೂರಕ ಅಂದಾಜುಗಳ 3ನೇ ಕಂತಿಗೆ ಅನುಮೋದನೆಗೊಂಡ ನಂತರ ಜಿಲ್ಲಾಧಿಕಾರಿಗಳು ಚಿಕ್ಕಮಗಳೂರು ಇವರಿಗೆ ಬಿಡುಗಡೆ ಮಾಡಲು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 56 ಎಫ್‌ಜಿಎಲ್ 2005, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಂತೆ ಚಿಕ್ಕಮಗಳೂರು ಜಿಲ್ಲೆಯಲ್ಲಿನ ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯ ಪ್ರದೇಶದಿಂದ ತೆರವುಗೊಳಿಸಿದ ಜನರ ಪುನರ್ವಸತಿ ಪ್ಯಾಕೇಜಿಗೆ ಸಂಬಂಧಪಟ್ಟಂತೆ ಪ್ರಸಕ್ತ ಸಾಲಿನ ಪೂರಕ ಅಂದಾಜುಗಳ 3ನೇ ಕಂತಿನಲ್ಲಿ ಲೆಕ್ಕ ಶೀರ್ಷಿಕೆ 2406-01-800-0-08-059 ಅಡಿಯಲ್ಲಿ ರೂ.5.00 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಈ ಮೊತ್ತವನ್ನು ಪೂರಕ ಅಂದಾಜುಗಳ 3ನೇ ಕಂತಿಗೆ ಅನುಮೋದನೆ ದೊರೆತ ನಂತರ ಜಿಲ್ಲಾಧಿಕಾರಿ ಚಿಕ್ಕಮಗಳೂರು ರವರಿಗೆ ಬಿಡುಗಡೆ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 179 ವೆಚ್ಚ-2 2006 ದಿನಾಂಕ: 23.03.2006ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಆರ್. ವತ್ಸಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್.519

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಜಿ.ಆರ್. ರಂಗಸ್ವಾಮಿ, ಅಂದಿನ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಚಿಕ್ಕಮಗಳೂರು, ಇವರ ವಿರುದ್ಧ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರಡಿ ದಾಖಲಾಗಿರುವ ಟ್ರ್ಯಾಪ್ ಪ್ರಕರಣ- ಅಭಿಯೋಜನಾ ಮಂಜೂರಾತಿ ಬಗ್ಗೆ.

**ಉಲ್ಲೇಖ:** (1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ ತನಿಖೆ/ ಎಂ-4/ ಪ್ರಸಂ-3/ 2005 ಚಿಕ್ಕಮಗಳೂರು ದಿನಾಂಕ: 01.12.2005.

(2) ಅ.ಸ. ಪತ್ರ ಸಂಖ್ಯೆ: ಲೋಕ್/ ಐಎನ್‌ವಿ(ಜಿ)/ ಎಂ-4/ ಸಿಆರ್-3/ 2005, ಚಿಕ್ಕಮಗಳೂರು ದಿನಾಂಕ:24.01.2006.

ಶ್ರೀ ಜಿ.ಆರ್. ರಂಗಸ್ವಾಮಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ (ಸ್ಥಿತ್ಯಂತರ), ಹಾಸನ (ಆರೋಪಿತ ಅಧಿಕಾರಿ) ಇವರು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಚಿಕ್ಕಮಗಳೂರು ಆಗಿ ಕಾರ್ಯನಿರ್ವಹಿಸುತ್ತಿದ್ದಾಗ, ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಚಿಕ್ಕಮಗಳೂರು ಇಲ್ಲಿ ದಿನಾಂಕ: 31.03.2005ರಂದು ಶ್ರೀ ತೇಜಿ ರಾಮಚಂದ್ರ ಬಿನ್ ತಿಮ್ಮಶೆಟ್ಟಿ, ಮಾಲೀಕರು ಮೆ: ತೇಜ ಗೊಬ್ಬರ ಮತ್ತು ಸಿಮೆಂಟ್ ಅಂಗಡಿ, ಚಿಕ್ಕಮಗಳೂರು ಇವರು ಸಲ್ಲಿಸಿದ್ದ ಲಿಖಿತ ದೂರನ್ನು ಆಧರಿಸಿ, ಆರೋಪಿತ ಅಧಿಕಾರಿಯ ವಿರುದ್ಧ ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ:3/2005ನ್ನು ದಾಖಲಿಸಿಕೊಂಡು, ಪ್ರಥಮ ವರ್ತಮಾನ ವರದಿಯನ್ನು ತಯಾರಿಸಿದ್ದಾರೆ ಮತ್ತು ತನಿಖೆ ಕೈಗೊಂಡಿರುತ್ತಾರೆ. ದಾಖಲಾಗಿರುವ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿದ ತನಿಖಾಧಿಕಾರಿಯ ಅಂತಿಮ ವರದಿಯ ಪ್ರಕಾರ ಆರೋಪಿತ ಅಧಿಕಾರಿಯ ವಿರುದ್ಧದ ಆಪಾದನೆ ಮೇಲ್ನೋಟಕ್ಕೆ ಸಾಬಿತಾಗಿರುವುದರಿಂದ, ಸದರಿ ಆಪಾದಿತ ಸರ್ಕಾರಿ ಅಧಿಕಾರಿಯು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಉಲ್ಲೇಖಿತ ಕಾಯ್ದೆಯ ಕಲಂ 19(1)ರ ಅನ್ವಯ ಮಂಜೂರಾತಿಯನ್ನು ನೀಡಲು ಮೇಲೆ ಕ್ರ.ಸಂ.1ರಲ್ಲಿ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿದ್ದಾರೆ.

ಈ ಪ್ರಕರಣದಲ್ಲಿ ದಿನಾಂಕ: 23.01.2006ರಂದು ಲೋಕಾಯುಕ್ತ ಕಛೇರಿಯಿಂದ ಒದಗಿಸಿರುವ ಪ್ರಥಮ ವರ್ತಮಾನ ವರದಿ, ತನಿಖಾ ವರದಿ, ಟ್ರ್ಯಾಪ್ ಪೂರ್ವದ ಮಹಜರ್, ಟ್ರ್ಯಾಪ್ ನಡವಳಿಗಳು, ರಾಸಾಯನಿಕ ತಜ್ಞರ ವರದಿ, ವಶಪಡಿಸಿಕೊಂಡ ದಾಖಲೆಗಳ ಪ್ರತಿ, ಕೃತ್ಯ ನಡೆದ ಸ್ಥಳದ ನಕ್ಷೆ, ದಾಖಲೆಗಳ ಪ್ರತಿಗಳು, ಸಾಕ್ಷಿಗಳ ಹೇಳಿಕೆಗಳು ಇತ್ಯಾದಿ ದಾಖಲೆಗಳನ್ನು ಪರಿಶೀಲಿಸಲಾಗಿದೆ.

ಈ ಪ್ರಕರಣದ ತನಿಖೆಯನ್ನು ಪಂಚ ಸಾಕ್ಷಿಗಳ ಸಮಕ್ಷಮದಲ್ಲಿ ಪ್ರಕರಣದ ಪಂಚನಾಮೆಯನ್ನು ಮಾಡಿಸಿದ್ದಾರೆ. ಮಹಜರನ್ನು ತಯಾರಿಸಿದ್ದಾರೆ. ತನಿಖಾ ಕಾಲದಲ್ಲಿ ದಿನಾಂಕ: 01.04.2005ರಂದು ಆರೋಪಿತ ಅಧಿಕಾರಿ ಶ್ರೀ ಜಿ.ಆರ್. ರಂಗಸ್ವಾಮಿ ಇವರು ಟ್ರ್ಯಾಪ್ ಆಗಿರುತ್ತಾರೆ. ತನಿಖಾ ಕಾಲದಲ್ಲಿ ಸಂಗ್ರಹಿಸಿದ ದಾಖಲಾತಿಗಳಿಂದ, ವಶಪಡಿಸಿಕೊಂಡ ದಾಖಲಾತಿಗಳ ಪರಿಶೀಲನೆಯಿಂದ, ಸಾಕ್ಷ್ಯದಾರರುಗಳ ವಿಚಾರಣೆಯಿಂದ ಮತ್ತು ರಾಸಾಯನಿಕ ಪರೀಕ್ಷಕರ ವರದಿಯಿಂದ ಆಪಾದಿತ ಸರ್ಕಾರಿ ಅಧಿಕಾರಿ ಇವರ ವಿರುದ್ಧ ಮಾಡಲಾದ ಆರೋಪಣೆಗಳ ಸಂಬಂಧ ಕಂಡು ಬಂದ ಅಂಶಗಳನ್ನು ತನಿಖಾಧಿಕಾರಿಯು ದಿನಾಂಕ: 19.09.2005ರ ತಮ್ಮ ತನಿಖಾ ವರದಿಯಲ್ಲಿ ವಿವರಿಸಿದ್ದಾರೆ. ಅದರಂತೆ ಆಪಾದಿತ ಸರ್ಕಾರಿ ಅಧಿಕಾರಿ ರೂ.15,000-00ಗಳ ಲಂಚದ ಹಣವನ್ನು ಒತ್ತಾಯಿಸಿ ಪಡೆದುಕೊಂಡ ನಂತರ ಫಿರ್ಯಾದುದಾರರ ಪ್ರಕರಣದಲ್ಲಿ ತೆಗೆದುಕೊಂಡ ಅಧಿಕೃತ ಕ್ರಮಗಳನ್ನು ಲಂಚದ ಹಣವನ್ನು ಪಡೆಯುವ ಪೂರ್ವದಲ್ಲೇ ನಿಭಾಯಿಸಬಹುದಾಗಿತ್ತೆಂದು ಅಭಿಪ್ರಾಯಿಸಿದ್ದಾರೆ. ಆಪಾದಿತ ಸರ್ಕಾರಿ ಅಧಿಕಾರಿ ಇವರು ಫಿರ್ಯಾದುದಾರರಿಂದ ಲಂಚ ಪಡೆದ ವೇಳೆಗೆ ನಡೆಸಿದ ಸಂಭಾಷಣೆಯು (ವಾಯ್ಸ್ ರೆಕಾರ್ಡ್) ರೆಕಾರ್ಡ್ ಆಗಿರುತ್ತದೆ ಎಂದಿದ್ದಾರೆ.

ಶ್ರೀ ಜಿ.ಆರ್. ರಂಗಸ್ವಾಮಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಇವರ ಮೇಲಿನ ಆರೋಪವು ತನಿಖೆಯಲ್ಲಿ ನಿಜವೆಂದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದಲೂ ಹಾಗೂ ಕ್ರಿಮಿನಲ್ ಮೊಕದ್ದಮೆ ಹೂಡಲು ಇದು ಸೂಕ್ತ ಪ್ರಕರಣವೆಂದು ಕಂಡುಬಂದಿರುವುದರಿಂದಲೂ ಈ ಆರೋಪಿತ ಅಧಿಕಾರಿಯ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಉಲ್ಲೇಖಿತ ಕಾಯ್ದೆಯ ಕಲಂ 19(1)ರ ಅನ್ವಯ ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಅನುಮತಿ ನೀಡಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 18 ವಾತೆತ 2005, ಬೆಂಗಳೂರು, ದಿನಾಂಕ:28ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಜಿ.ಆರ್. ರಂಗಸ್ವಾಮಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡುತ್ತದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 28.03.2006ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆಲಿಸ್ ಗೋನ್ಸಾಲ್ವಿಸ್**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾ.ತೆ.-2)

ಪಿ.ಆರ್.520

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಹೆಚ್. ಚಂದ್ರಶೇಖರಯ್ಯ, ಶ್ರೀ ಎಸ್. ಕೃಷ್ಣಶೆಟ್ಟಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 133 ಎಸ್ಇಎನ್ 2004, ಬೆಂಗಳೂರು, ದಿನಾಂಕ: 27ನೇ ಮಾರ್ಚ್, 2006**

ಹುಲ್ಲಳ್ಳಿ ಕಾಲುವೆ ಆಧುನೀಕರಣ ಕಾಮಗಾರಿಯಿಂದ ಸಮಯದಲ್ಲಿ ಅಂದರೆ ಶ್ರೀ ಹೆಚ್. ಚಂದ್ರಶೇಖರಯ್ಯ ರವರು ದಿನಾಂಕ: 20.10.01 ರಿಂದ 26.02.03ರವರೆಗೆ ಮುಖ್ಯ ಇಂಜಿನಿಯರ್ ಆಗಿಯೂ ಶ್ರೀ ಕೃಷ್ಣಶೆಟ್ಟಿ, ಸೂಪರಿಂಟೆಂಡಿಂಗ್ ಇಂಜಿನಿಯರ್, ಕಬಿನಿ ಮತ್ತು ವರುಣಾ ನಾಲಾ ವೃತ್ತ, ಮೈಸೂರು ಆಗಿ ದಿನಾಂಕ: 22.05.02 ರಿಂದ 26.12.02 ಆಗಿ ಕಾರ್ಯನಿರ್ವಹಿಸಿದ ಅವಧಿಯಲ್ಲಿ ಹುಲ್ಲಳ್ಳಿ ಕಾಲುವೆ ಆಧುನೀಕರಣ ಕಾಮಗಾರಿಯು ಕಳಪೆ ಕಾಮಗಾರಿಯಾಗಲು ಕಾರಣರಾಗಿದ್ದು, ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಾವಳಿ 1966ರ ನಿಯಮ 3(1) (i) (ii) (iii)ನ್ನು ಉಲ್ಲಂಘಿಸಿದ ಆರೋಪಕ್ಕೆ ಕಾರಣರಾಗಿ, ತೀವ್ರ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಹೆಚ್. ಚಂದ್ರಶೇಖರಯ್ಯ ಹಾಗೂ ಶ್ರೀ ಎಸ್. ಕೃಷ್ಣಶೆಟ್ಟಿ, ನಿವೃತ್ತ ಮುಖ್ಯ ಇಂಜಿನಿಯರ್‌ಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹೆಚ್. ಚಂದ್ರಶೇಖರಯ್ಯ ಹಾಗೂ ಶ್ರೀ ಎಸ್. ಕೃಷ್ಣಶೆಟ್ಟಿ, ನಿವೃತ್ತ ಮುಖ್ಯ ಇಂಜಿನಿಯರ್‌ಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖೆ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು ಎಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3)

ಪಿ.ಆರ್.521

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ.ವಿ. ರಾಯ್ಕರ್, ಸರ್ಕಾರಿ ಅಭಿಯೋಜಕರು (ನಿವೃತ್ತ) ಅವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಲಾ 29 ಪಿಪಿಇ 95, ದಿನಾಂಕ: 08.05.95.

(2) ಸರ್ಕಾರದ ಆದೇಶ ಸಂಖ್ಯೆ: ಲಾ 29 ಪಿಪಿಇ 95, ದಿನಾಂಕ: 13.12.95.

(3) ಲೋಕಾಯುಕ್ತರ ವಿಚಾರಣಾ ವರದಿ ನಂ.LOK/ ARE-3/ ENQ-10/ 97-98, ದಿನಾಂಕ: 31.12.2002.

(4) ಸರ್ಕಾರದ ಆದೇಶ ನಂ.ಲಾ 29 ಪಿಪಿಇ 95, ದಿನಾಂಕ: 17.03.2003.

(5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ನಿಶಾ/ 1/ 53/ 2005-06, ದಿನಾಂಕ: 08.02.2006.

**ಪ್ರಸ್ತಾವನೆ:**

ಶ್ರೀ ಬಿ.ವಿ. ರಾಯ್ಕರ್, ಸರ್ಕಾರಿ ಅಭಿಯೋಜಕರು (ನಿವೃತ್ತ) ಇವರು 1994-95ರ ವರ್ಷದಲ್ಲಿ ಸರ್ಕಾರಿ ಅಭಿಯೋಜಕರಾಗಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಡಿಕೇರಿ, ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಅವರ ವಿರುದ್ಧ ಲೋಕಾಯುಕ್ತ ಪ್ರಕರಣ ದಾಖಲಾಗಿದ್ದು, ಮಡಿಕೇರಿ ಸತ್ರ ನ್ಯಾಯಾಲಯದ ಎಸ್.ಸಿ. ನಂ.45/ 90 ಪ್ರಕರಣವು ದಾಖಲಾಗಿ, ಮೇಲೆ ಓದಲಾದ (1)ರಲ್ಲಿ ಇಲಾಖೆ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಸದರಿಯವರ ಮೇಲೆ ಇಲಾಖಾ ವಿಚಾರಣೆಯನ್ನು ಲೋಕಾಯುಕ್ತರಿಗೆ ವಹಿಸಲಾಯಿತು. ಮೇಲೆ ಓದಲಾದ (3)ರ ಲೋಕಾಯುಕ್ತರ ಪತ್ರದಲ್ಲಿ ಸದರಿ ಅಧಿಕಾರಿಯವರ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಆರೋಪವು ಸಾಬೀತಾಗಿರುವುದಿಲ್ಲವಾದ್ದರಿಂದ, ಸದರಿ ಅಧಿಕಾರಿಯ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿರುತ್ತದೆ.

ಮೇಲೆ ಓದಲಾದ (5)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಶ್ರೀ ವಿ.ವಿ. ರಾಯ್ಕರ್, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರಿಗೆ 13.12.1994ರಿಂದ 30.11.1995ರ ವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್ಸ್. ನಿಯಮ 100(1)(ಬಿ)ರ ಅನುಸಾರ ವೇತನ ಮತ್ತು ಭತ್ಯೆಗಳನ್ನು ಸಂದಾಯ ಮಾಡುವ ಬಗ್ಗೆ ಮೇಲಿನ ನಿಲಂಬನ ಅವಧಿಯನ್ನು "ಕರ್ತವ್ಯದ ಅವಧಿ" ಎಂದು ಘೋಷಿಸಿ ಸಕ್ರಮಗೊಳಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, 13.12.1994 ರಿಂದ 30.11.1995ರ ವರೆಗಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಲು ತೀರ್ಮಾನಿಸಲಾಗಿದೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 542 ಪಿಪಿಇ 2005, ಬೆಂಗಳೂರು, ದಿನಾಂಕ: 31ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಶ್ರೀ ಬಿ.ವಿ. ರಾಯ್ಕರ್, ಸರ್ಕಾರಿ ಅಭಿಯೋಜಕರು (ನಿವೃತ್ತ) ಇವರ ದಿನಾಂಕ: 13.12.1994 ರಿಂದ 30.11.1995 ರವರೆಗಿನ ಅಮಾನತ್ತಿನ ಅವಧಿಯನ್ನು (ಎರಡೂ ದಿನಗಳು ಸೇರಿ) 1957ರ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100 (1) (ಬಿ) ರನ್ವಯ "ಕರ್ತವ್ಯದ ಅವಧಿ" ಎಂಬುದಾಗಿ ಪರಿಗಣಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

ಪಿ.ಆರ್.522

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** 10 ಜನ ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು 58 ವರ್ಷಗಳ ಸೇವೆಯ ನಂತರ 60 ವರ್ಷಗಳವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಜಿ.ಓ.ಬಿ. (I) 296: 2005, ದಿನಾಂಕ: 08.03.2006.

**ಪ್ರಸ್ತಾವನೆ:**

ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು 58 ವರ್ಷದ ನಂತರವೂ ಮುಂದುವರಿಸುವ ಬಗ್ಗೆ ಉಚ್ಚ ನ್ಯಾಯಾಲಯದ ಸ್ಕ್ರೀನಿಂಗ್ ಸಮಿತಿ ಮೌಲ್ಯಮಾಪನ ಮಾಡಿ 58 ವರ್ಷದ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 95(ಎ)ರ ಅನ್ವಯ 58 ವರ್ಷಗಳ ವಯಸ್ಸಿನ ನಂತರ 60 ವರ್ಷಗಳವರೆಗೆ ಮುಂದುವರಿಸಬಹುದಾಗಿದೆ. ಅದರಂತೆ ಕೆಳಕಂಡ 10 ಜನ ಜಿಲ್ಲಾ ನ್ಯಾಯಾಧೀಶರುಗಳ ಗೌಪ್ಯ ವರದಿ, ಹಾಗೂ ಇತರ ದಾಖಲೆಗಳೊಂದಿಗೆ ಪರಿಶೀಲಿಸಿ ಅವರುಗಳನ್ನು 58 ವರ್ಷಗಳ ನಂತರ ಅಂದರೆ 60 ವರ್ಷಗಳವರೆಗೆ ಸೇವೆಯಲ್ಲಿ ಮುಂದುವರಿಸಲು ಶಿಫಾರಸ್ಸು ಮಾಡಿದರಂತೆ ಕರ್ನಾಟಕ ಉಚ್ಚ ನ್ಯಾಯಾಲಯದ ಪೂರ್ಣ ಪೀಠವು ಅನುಮೋದಿಸಿರುವುದಾಗಿ ಮೇಲೆ ಓದಲಾದ ದಿನಾಂಕ: 08.03.2006 ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರು ತಿಳಿಸಿ ಕೆಳಕಂಡ 10 ಜನ ಜಿಲ್ಲಾ ನ್ಯಾಯಾಧೀಶರುಗಳು, ಅವರುಗಳ ಹೆಸರಿನ ಮುಂದೆ ಸೂಚಿಸಿರುವ ದಿನಾಂಕದಂದು 58 ವರ್ಷಗಳ ವಯೋಮಿತಿಯನ್ನು ಪೂರೈಸಲಿದ್ದು ಇವರುಗಳ ಸೇವೆಯನ್ನು 58 ವರ್ಷಗಳ ನಂತರ 60 ವರ್ಷದವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರದ ಆದೇಶ ಕೋರಿರುತ್ತಾರೆ.

| ಕ್ರ.ಸಂ. | ಜಿಲ್ಲಾ ನ್ಯಾಯಾಧೀಶರುಗಳ ಹೆಸರು | 58 ವರ್ಷಗಳ ವಯೋಮಿತಿಯನ್ನು ಪೂರೈಸಲಿರುವ ದಿನಾಂಕ |
|---|---|---|
| 1. | ಶ್ರೀ ಪ್ರಕಾಶ್ ಬಿ. ಕಠಾರೆ | 31.03.2006 |
| 2. | ಶ್ರೀ ಆರ್.ಎಸ್. ಬೀರಣ್ಣವರ್ | 31.03.2006 |
| 3. | ಶ್ರೀ ಪ್ರಕಾಶ್ ಬಳ್ಳಾರಿ | 30.04.2006 |
| 4. | ಶ್ರೀ ಎಸ್.ಡಿ. ಪರಾಮಜ್ | 31.05.2006 |
| 5. | ಶ್ರೀ ಎಸ್.ಟಿ. ಕುಡಾಸೋಮಣ್ಣವರ್ | 30.06.2006 |
| 6. | ಶ್ರೀ ಟಿ.ಹೆಚ್. ನಾರಾಯಣಗೌಡ | 30.06.2006 |
| 7. | ಶ್ರೀ ಪಂಪಾಪತಿ | 30.06.2006 |
| 8. | ಶ್ರೀ ಎಂ.ಕೆ. ಶ್ರೀಪತಿ | 30.06.2006 |
| 9. | ಶ್ರೀ ಸುಧಾಕರ್ ಎ. ಪಂಡಿತ್ | 31.07.2006 |
| 10. | ಶ್ರೀ ಕೆ.ಜಿ. ಹೊಸೂರ್ | 31.08.2006 |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 20 ಸೇಉನ್ಯಾ 2006, ಬೆಂಗಳೂರು, ದಿನಾಂಕ: 29ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡ 10 ಜನ ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ದಿನಾಂಕಗಳಂದು ಅವರುಗಳು 58 ವರ್ಷಗಳ ವಯೋಮಿತಿ ಪೂರೈಸಿದ ನಂತರವೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ) ರನ್ವಯ 60 ವರ್ಷಗಳ ವಯೋಮಿತಿಯ ವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರವು ಆದೇಶಿಸಿದೆ.

| ಕ್ರ.ಸಂ. | ಜಿಲ್ಲಾ ನ್ಯಾಯಾಧೀಶರುಗಳ ಹೆಸರು ಮತ್ತು ಪದನಾಮ<br>**ಶ್ರೀಯುತರುಗಳು** | 58 ವರ್ಷಗಳ ವಯೋಮಿತಿಯನ್ನು ಪೂರೈಸಲಿರುವ ದಿನಾಂಕ |
|---|---|---|
| 1. | ಶ್ರೀ ಪ್ರಕಾಶ್ ಬಿ. ಕಠಾರೆ,<br>ಜಿಲ್ಲಾ ನ್ಯಾಯಾಧೀಶರು, ಅನ್ಯ ಕರ್ತವ್ಯದ ಮೇಲೆ ಸದಸ್ಯರು, ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ, ಬೆಂಗಳೂರು. | 31.03.2006 |
| 2. | ಶ್ರೀ ಆರ್.ಎಸ್. ಬೀರಣ್ಣವರ್<br>2ನೇ ಅಪರ ಜಿಲ್ಲಾ ಮತ್ತು ಸೆಷನ್ಸ್ ಜಡ್ಜ್, ದಕ್ಷಿಣ ಕನ್ನಡ, ಮಂಗಳೂರು. | 31.03.2006 |
| 3. | ಶ್ರೀ ಪ್ರಕಾಶ್ ಬಳ್ಳಾರಿ<br>ಪ್ರಿನ್ಸಿಪಾಲ್ ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಜಡ್ಜ್, ಬಿಜಾಪುರ. | 30.04.2006 |
| 4. | ಶ್ರೀ ಎಸ್.ಡಿ. ಪರಾಮಜ್<br>ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಜಡ್ಜ್, ಚಾಮರಾಜನಗರ. | 31.05.2006 |
| 5. | ಶ್ರೀ ಎಸ್.ಟಿ. ಕುಡಾಸೋಮಣ್ಣವರ್<br>ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಜಡ್ಜ್, ಬಾಗಲಕೋಟೆ. | 30.06.2006 |
| 6. | ಶ್ರೀ ಟಿ.ಹೆಚ್. ನಾರಾಯಣಗೌಡ<br>9ನೇ ಅಪರ ಸಿಟಿ ಸಿವಿಲ್ ಮತ್ತು ಸೆಷನ್ಸ್ ಜಡ್ಜ್, ಬೆಂಗಳೂರು ಸಿಟಿ. | 30.06.2006 |
| 7. | ಶ್ರೀ ಪಂಪಾಪತಿ<br>ಪ್ರಿಸೈಡಿಂಗ್ ಆಫೀಸರ್, ಫಾಸ್ಟ್ ಟ್ರ್ಯಾಕ್ ಕೋರ್ಟ್ 6, ಗುಲ್ಬರ್ಗಾ. | 30.06.2006 |
| 8. | ಶ್ರೀ ಎಂ.ಕೆ. ಶ್ರೀಪತಿ<br>ಪ್ರಿಸೈಡಿಂಗ್ ಆಫೀಸರ್ ಇಂಡಸ್ಟ್ರಿಯಲ್ ಟ್ರಿಬ್ಯೂನಲ್, ಬೆಂಗಳೂರು. | 30.06.2006 |
| 9. | ಶ್ರೀ ಸುಧಾಕರ್ ಎ. ಪಂಡಿತ್<br>ಡಿಸ್ಟ್ರಿಕ್ ಜಡ್ಜ್ ಅನ್ಯ ಕರ್ತವ್ಯದ ಮೇಲೆ ಅಡಿಷನಲ್ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು. | 31.07.2006 |
| 10. | ಶ್ರೀ ಕೆ.ಜಿ. ಹೊಸೂರ್<br>ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಜಡ್ಜ್, ಬಳ್ಳಾರಿ. | 31.08.2006 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್.523

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3)

## ವಾಣಿಜ್ಯ ಮತ್ತು ಕೈಗಾರಿಕೆ ಸಂಸ್ಥತಿ ಸಚಿವಾಲಯ

**ವಿಷಯ:** ರಾಜ್ಯದ ಸಕ್ಕರೆ ಕಾರ್ಖಾನೆಗಳು ರಫ್ತು ಮಾಡಿದ ಸಕ್ಕರೆಗೆ ಪ್ರತಿ ಮೆ. ಟನ್‌ಗೆ ರೂ.1,000ಗಳಂತೆ ರಫ್ತು ಸಹಾಯಧನ ನೀಡುವ ಬಗ್ಗೆ- ಹಣ ಬಿಡುಗಡೆ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಆದೇಶ ಸಂಖ್ಯೆ: ಸಿಐ: 231 ಎಸ್‌ಜಿಎಫ್ 03 ದಿನಾಂಕ: 10.09.2003.

(2) ಸರ್ಕಾರದ ಆದೇಶ ಸಂಖ್ಯೆ: ಸಿಐ: 231 ಎಸ್‌ಜಿಎಫ್ 03(2) ದಿನಾಂಕ: 15.12.2004.

(3) ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 805 ವೆಚ್ಚ-1/ 2005 ದಿನಾಂಕ: 09.09.2005.

(4) ಸರ್ಕಾರದ ಆದೇಶ ಸಂಖ್ಯೆ: ಸಿಐ 182 ಎಸ್‌ಜಿಎಫ್ 05 ದಿನಾಂಕ: 27.09.2005.

(5) ಸರ್ಕಾರದ ಆದೇಶ ಸಂಖ್ಯೆ: ಸಿಐ 231 ಎಸ್‌ಜಿಎಫ್ 03(3) ದಿನಾಂಕ: 11.11.05.

(6) ಸರ್ಕಾರದ ಆದೇಶ ಸಂಖ್ಯೆ: ಸಿಐ 231 ಎಸ್‌ಜಿಎಫ್ 03(4) ದಿನಾಂಕ: 09.01.06.

(7) ಆಯುಕ್ತರ ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ ಎಸ್‌ಟಿಟಿ/ 11/ 2005-06 ದಿನಾಂಕ: 25.01.2006.

(8) ಆಯುಕ್ತರು ವಾಣಿಜ್ಯ ತೆರಿಗೆ ಬೆಂಗಳೂರು ರವರ ಪತ್ರ ಸಂಖ್ಯೆ:ಆರ್‌ಎಫ್‌ಡಿ/ ಸಿಆರ್-4/2005-06 ದಿನಾಂಕ:23.03.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2002-03ನೇ ಸಾಲಿನಲ್ಲಿ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಕಬ್ಬು ಖರೀದಿ ಹಣವನ್ನು ಬಾಕಿ ಉಳಿಸಿಕೊಂಡಿದ್ದು, ಸದರಿ ಬಾಕಿ ಹಣ ಪಾವತಿಸಲು ಸಹಾಯಕವಾಗಲು ಕಾರ್ಖಾನೆಗಳು ರಫ್ತು ಮಾಡುವ ಪ್ರತಿ ಮೆಟ್ರಿಕ್ ಟನ್ ಸಕ್ಕರೆ ರೂ.1,000/-ಗಳಂತೆ ರಫ್ತು ಸಹಾಯಧನವನ್ನು ನೀಡಲು ಹಾಗೂ ಈ ರಫ್ತು ಸಹಾಯಧನ ಮೊತ್ತವನ್ನು ರೂ.20.00 ಕೋಟಿಗಳಿಗೆ ಮಿತಿಗೊಳಿಸಿ ಕೆಲವು ಷರತ್ತುಗಳನ್ನು ವಿಧಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳು ದಿನಾಂಕ: 10.09.2003 ರಿಂದ 31.03.2004ರ ಅವಧಿಯಲ್ಲಿ ಸಕ್ಕರೆಯನ್ನು ರಫ್ತು ಮಾಡಿದ್ದು ದಿನಾಂಕ: 10.09.2003ರ ಸರ್ಕಾರದ ಆದೇಶದ ಮೇರೆಗೆ ಈ ಕಾರ್ಖಾನೆಗಳಿಗೆ 363.85 ಲಕ್ಷ ರೂ.ಗಳ ಸಹಾಯ ಧನವನ್ನು ಬಿಡುಗಡೆಗೆ ಆದೇಶಿಸಲಾಗಿತ್ತು.

| | |
|---|---|
| 1. ಗೋದಾವರಿ ಶುಗರ್ಸ್ ಸಮೀರವಾಡಿ, ಬಾಗಲಕೋಟೆ ಜಿಲ್ಲೆ | 98.62 |
| 2. ಜೆಮ್ ಶುಗರ್ಸ್ (ಲಿ) ಕುಂದರಗಿ, ಬಾಗಲಕೋಟೆ ಜಿಲ್ಲೆ | 130.13 |
| 3. ಶ್ರೀ ಚಾಮುಂಡೇಶ್ವರಿ ಶುಗರ್ಸ್ (ಲಿ) ಮದ್ದೂರು ತಾಲ್ಲೂಕು | 77.50 |
| 4. ಉಗಾರ್ ಶುಗರ್ಸ್ (ಲಿ) ಉಗಾರ್ ಖುರ್ದ್, ಬೆಳಗಾಂ ಜಿಲ್ಲೆ | 11.00 |
| 5. ಭಾಗ್ಯಲಕ್ಷ್ಮೀ ಸಸಕಾ, ಬೆಳಗಾಂ ಜಿಲ್ಲೆ, | 46.60 |
| ಒಟ್ಟು | 363.85 |

ಉಲ್ಲೇಖ (2)ರ ಆದೇಶದಲ್ಲಿ ಮಂಜೂರಾದ ಹಣವನ್ನು ದಿನಾಂಕ: 31.03.2005ರ ಅಂತ್ಯದೊಳಗೆ ಬಿಡುಗಡೆಗೊಳಿಸಲು ಸಾಧ್ಯವಾಗದ ಕಾರಣ 2005-06ನೇ ಸಾಲಿನ ಪೂರಕ ಅನುದಾನದಲ್ಲಿ (ಮೊದಲನೆ ಕಂತು) ಒದಗಿಸಿದ್ದು ಈ ಹಣ ಬಿಡುಗಡೆಗೆ ಮುನ್ನ ಕಾರ್ಖಾನೆಗಳು ಕಬ್ಬು ಖರೀದಿ ತೆರಿಗೆ ಬಾಕಿ ಉಳಿಸಿಕೊಂಡಿದ್ದಲ್ಲಿ ಈ ಬಾಕಿಗೆ ಬಿಡುಗಡೆ ಮಾಡುವ ರಫ್ತು ಸಹಾಯಧನವನ್ನು ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದ ಹಣವನ್ನು ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಉಲ್ಲೇಖ (3)ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ. ಅದರಂತೆ ಶ್ರೀ ಚಾಮುಂಡೇಶ್ವರಿ ಶುಗರ್ಸ್ (ಲಿ) ಕೆ.ಎಂ.ದೊಡ್ಡಿ ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ರವರು ಹಾಗೂ ಉಗಾರ್ ಶುಗರ್ಸ್ (ಲಿ), ಉಗಾರ್ ಖುರ್ದ್, ಬೆಳಗಾಂ ಜಿಲ್ಲೆ ರವರು ಸರ್ಕಾರಕ್ಕೆ ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಗೆ ಈ ಕಾರ್ಖಾನೆಗಳಿಗೆ ಮಂಜೂರಾಗಿದ್ದ 77.50 ಲಕ್ಷ ಮತ್ತು 11.00 ಲಕ್ಷ ರೂ.ಗಳನ್ನು ಹೊಂದಾಣಿಕೆ ಮಾಡಿಕೊಳ್ಳಲು ನಿರ್ಧರಿಸಿ ಉಲ್ಲೇಖ (5)ರಲ್ಲಿರುವ ಆದೇಶದಲ್ಲಿ ಆದೇಶಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (6)ರಲ್ಲಿರುವ ಆದೇಶದಲ್ಲಿ ಮೆ. ಜೆಮ್ ಶುಗರ್ಸ್ (ಲಿ), ಕುಂದರಗಿ ರವರಿಗೆ 130.12 ಲಕ್ಷ ರೂ.ಗಳನ್ನು ಹಾಗೂ ಮೆ. ಗೋದಾವರಿ ಶುಗರ್ಸ್ (ಲಿ), ಸಮೀರವಾಡಿ ರವರಿಗೆ 98.62 ಲಕ್ಷ ರೂ.ಗಳನ್ನು ರಫ್ತು ಸಹಾಯಧನವಾಗಿ ಬಿಡುಗಡೆ ಮಾಡಲು ಆದೇಶಿಸಲಾಗಿದೆ. ಆದರೆ ಉಲ್ಲೇಖ (3)ರಲ್ಲಿರುವ ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿಯಲ್ಲಿ ಸೂಚಿಸಿದಂತೆ, ಒದಗಿಸಿದ್ದ 363.85 ಲಕ್ಷ ರೂಗಳ ಅನುದಾನದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಗೆ ಉಲ್ಲೇಖ (4)ರಲ್ಲಿರುವ ಸರ್ಕಾರದ ಆದೇಶದಲ್ಲಿ 147.71 ಲಕ್ಷ ರೂ.ಗಳ ರಫ್ತು ಸಹಾಯ ಧನವನ್ನು ಬಿಡುಗಡೆಗೊಳಿಸಿದ ಕಾರಣ ಈ ಹಣ ಕೊರತೆಯಾಗಿದ್ದು ಜೆಮ್ ಶುಗರ್ಸ್ ರವರಿಗೆ 130.13 ಲಕ್ಷ ರೂಗಳನ್ನು ಪೂರ್ಣವಾಗಿ ಮತ್ತು ಗೋದಾವರಿ ಶುಗರ್ಸ್ 86.01 ಲಕ್ಷ ರೂ.ಗಳನ್ನು ಮಾತ್ರ ಬಿಡುಗಡೆ ಮಾಡಿದ್ದು ಗೋದಾವತಿ ಶುಗರ್ಸ್ ರವರಿಗೆ ರೂ.12.61 ಲಕ್ಷಗಳನ್ನು ಕಡಿಮೆ ಪಾವತಿ ಮಾಡಿರುವುದಾಗಿ ತಿಳಿಸಿ ಶ್ರೀ ಚಾಮುಂಡೇಶ್ವರಿ ಶುಗರ್ಸ್, ಉಗಾರ್ ಶುಗರ್ಸ್, ಭಾಗ್ಯಲಕ್ಷ್ಮೀ ಶುಗರ್ಸ್ ಮತ್ತು ಗೋದಾವತಿ ಶುಗರ್ಸ್ ಈ ಕಾರ್ಖಾನೆಗಳಿಗೆ ರಫ್ತು ಸಹಾಯಧನ ಬಿಡುಗಡೆ ಮಾಡಲು ಕೊರತೆಯಾಗಿರುವ 147.71 ಲಕ್ಷ ರೂಗಳನ್ನು ಹೆಚ್ಚುವರಿಯಾಗಿ ಒದಗಿಸಲು ಆಯುಕ್ತರು ಕಬ್ಬ ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಉಲ್ಲೇಖ (7)ರಲ್ಲಿರುವ ಪತ್ರದಲ್ಲಿ ಕೋರಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (8)ರಲ್ಲಿರುವ ವಾಣಿಜ್ಯ ತೆರಿಗೆ ಆಯುಕ್ತರು ರವರ ಪತ್ರದಲ್ಲಿ ಶ್ರೀ ಭಾಗ್ಯಲಕ್ಷ್ಮೀ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಖಾನಾಪುರ, ಬೆಳಗಾಂ ಜಿಲ್ಲೆ, ಈ ಕಾರ್ಖಾನೆ ಒಟ್ಟಾರೆ 52,38,425.00 ರೂಗಳನ್ನು ಸರ್ಕಾರಕ್ಕೆ ತೆರಿಗೆ ಬಾಕಿ ಉಳಿಸಿಕೊಂಡಿರುವುದಾಗಿ ಆದುದರಿಂದ ಕಾರ್ಖಾನೆಗೆ ನೀಡಬೇಕಾದ ರಫ್ತು ಸಹಾಯ ಧನದಲ್ಲಿ ಹೊಂದಾಣಿಕೆ ಮಾಡಿಕೊಂಡು ಆದೇಶ ಹೊರಡಿಸಲು ಕೋರಿರುತ್ತಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಉಲ್ಲೇಖ (7) ರಲ್ಲಿರುವ ಪತ್ರದ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 231 ಎಸ್‌ಜಿಎಫ್ 2003(5), ದಿನಾಂಕ:31ನೇ ಮಾರ್ಚ್, 2006**

ರಾಜ್ಯದ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳು ಸಕ್ಕರೆ ರಫ್ತು ಮಾಡಿದ್ದು ಉಲ್ಲೇಖ (1)ರಲ್ಲಿನ ದಿನಾಂಕ: 10.09.03 ಸರ್ಕಾರದ ಆದೇಶ ಮೇರೆಗೆ ರಫ್ತು ಸಹಾಯಧನ 147.71 ಲಕ್ಷ ರೂಗಳನ್ನು (ನೂರ ನಲವತ್ತೇಳು ಲಕ್ಷ ಎಪ್ಪತ್ತೊಂದು ಸಾವಿರ ರೂ.ಗಳನ್ನು) ಈ ಕೆಳಕಂಡ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲಾಗಿದೆ. ಹಾಗೂ ಬಿಡುಗಡೆಯಾದ ಹಣದಲ್ಲಿ 135.10 ಲಕ್ಷ ರೂ.ಗಳನ್ನು ಈ ಕೆಳಕಂಡ ಕಾರ್ಖಾನೆಗಳು ಸರ್ಕಾರಕ್ಕೆ ನೀಡಬೇಕಾದ ತೆರಿಗೆ ಬಾಕಿಗೆ ಹೊಂದಾಣಿಕೆ ಮಾಡಿಕೊಳ್ಳಲಾಗಿದೆ. ಹಾಗೂ ಮೆ. ಗೋದಾವರಿ ಸಕ್ಕರೆ ಕಾರ್ಖಾನೆ, ಸಮೀರವಾಡಿ ಬಾಗಲಕೋಟೆ ಜಿಲ್ಲೆ ಈ ಕಾರ್ಖಾನೆಗೆ ಬಾಕಿ ನೀಡಬೇಕಾದ 12.61 ಲಕ್ಷ ರೂ.ಗಳ ರಫ್ತು ಸಹಾಯಧನವನ್ನು ಬಿಡುಗಡೆಗೆ ಮಂಜೂರು ಮಾಡಲಾಗಿದೆ.

| | |
|---|---|
| 1. ಶ್ರೀಚಾಮುಂಡೇಶ್ವರಿ ಶುಗರ್ಸ್ (ಲಿ) ಕೆ.ಎಂ. ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. | 77.50 ಲಕ್ಷ ರೂ.ಗಳು |
| 2. ಉಗಾರ್ ಶುಗರ್ಸ್ (ಲಿ) ಉಗಾರ್ ಖುರ್ದ್, ಬೆಳಗಾಂ ಜಿಲ್ಲೆ | 11.00 ಲಕ್ಷ ರೂ.ಗಳು |
| 3. ಭಾಗ್ಯಲಕ್ಷ್ಮೀ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಖಾನಾಪುರ, ಬೆಳಗಾಂ ಜಿಲ್ಲೆ | 46.60 ಲಕ್ಷ ರೂ.ಗಳು |
| ಸರ್ಕಾರಕ್ಕೆ ಹೊಂದಾಣಿಕೆ ಮಾಡಿಕೊಳ್ಳಬೇಕಾದ ಮೊತ್ತ ಒಟ್ಟು | 135.10 ಲಕ್ಷ ರೂ.ಗಳು |
| 1. ಮೆ. ಗೋದಾವರಿ ಶುಗರ್ಸ್ (ಲಿ), ಸಮೀರವಾಡಿ, ಬಾಗಲಕೋಟೆ ಜಿಲ್ಲೆ | 12.61 ಲಕ್ಷ ರೂ.ಗಳು |
| ಈ ಕಾರ್ಖಾನೆಗೆ ಬಿಡುಗಡೆ ಮಾಡಬೇಕಾದ ಬಾಕಿ ಮೊತ್ತ | |
| ಒಟ್ಟು | **147.71 ಲಕ್ಷ ರೂ.ಗಳು** |

ಈ ಹಣವನ್ನು ಲೆಕ್ಕ ಶೀರ್ಷಿಕೆ 2852-08-201-0-06 (ಎನ್‌ಪಿ) ಸಹಾಯಧನ ಪೂರಕ ಅಂದಾಜು 2005-06 (ಎರಡನೆ ಕಂತು) ರಲ್ಲಿ ಒದಗಿಸಲಾಗಿದೆ. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ರವರು ಖಜಾನೆಯಿಂದ ಹಣ ಸೆಳೆಯುವ ಅಧಿಕಾರಿಯಾಗಿದ್ದು ಸದರಿ ಯವರು ಹಣ ಬಿಡುಗಡೆಗೆ ಹಾಗೂ ಸರ್ಕಾರಕ್ಕೆ ಪಾವತಿಸಬೇಕಾದ ಖರೀದಿ ತೆರಿಗೆಯನ್ನು "ಲೆಕ್ಕ ಶೀರ್ಷಿಕೆ-0040-00-102-0-01-ಸೇಲ್ ಟ್ಯಾಕ್ಸ್" ಲೆಕ್ಕಕ್ಕೆ ಹೊಂದಾಣಿಕೆ ಮಾಡಲು ಕ್ರಮ ವಹಿಸುವುದು.

ಈ ಹೊಂದಾಣಿಕೆಯನ್ನು ಮಹಾಲೇಖಪಾಲರು ಲೆಕ್ಕ ಮತ್ತು ರಹದಾರಿ ರವರು ರಾಜ್ಯದ 2005-06ನೇ ಸಾಲಿನ ಲೆಕ್ಕಗಳಲ್ಲಿ ಹೊಂದಾಣಿಕೆಯನ್ನು ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 805 ವೆಚ್ಚ-1/ 2005 ದಿನಾಂಕ: 09.09.2005ರ ಸಹಮತಿಯಂತೆ ಹಾಗೂ ಎಫ್‌ಡಿ 1592 ವೆಚ್ಚ-1/ 2005 ದಿನಾಂಕ: 31.03.2006 ರಂದು ಟಿಪ್ಪಣಿಯಲ್ಲಿನ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.524

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಒಇ 1 ಪಿಪಿಇ 2006(ಭಾ), ಬೆಂಗಳೂರು, ದಿನಾಂಕ:23ನೇ ಮಾರ್ಚ್, 2006

1. ಸಮಸಂಖ್ಯೆಯ ಸರ್ಕಾರಿ ಆದೇಶ ದಿನಾಂಕ:19.01.2006ರ ಅಧಿಸೂಚನೆಯಲ್ಲಿನ ತಃಖ್ತೆಯ ಕ್ರಮ ಸಂಖ್ಯೆ (30)ರ ಅಂಕಣ (5)ರಲ್ಲಿ ನಮೂದಿಸಿರುವ 'ಸರ್ಕಾರಿ ಅಭಿಯೋಜಕರು, ಸತ್ರ ನ್ಯಾಯಾಲಯ, ಹುಬ್ಬಳ್ಳಿ' ಎಂಬುದರ ಬದಲಾಗಿ 'ಸರ್ಕಾರಿ ಅಭಿಯೋಜಕರು, ಹಾವೇರಿ' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಹಾಗೆಯೇ ಕ್ರಮ ಸಂಖ್ಯೆ 43ರ ಅಂಕಣ (03)ರಲ್ಲಿ ನಮೂದಿಸಿರುವ "5660/04" ಎಂಬುದರ ಬದಲಾಗಿ "5660/00" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಇದರ ಹೊರತಾಗಿ ಸದರಿ ಅಧಿಸೂಚನೆಯಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.525 ಒಳಾಡಳಿತ ಇಲಾಖೆ.

(ಕಾ. ಮತ್ತು ಸು. ಮತ್ತು ಕಾಫಿಪೋಸ ಮತ್ತು ಅಭಿಯೋಗ)

## ಸಾರಿಗೆ ಸಚಿವಾಲಯ

**ವಿಷಯ:** ಸಾರಿಗೆ ಇಲಾಖೆಯಲ್ಲಿ ಒಂದು ಜಂಟಿ ಸಾರಿಗೆ ಆಯುಕ್ತರು ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** (1) ಸಾರಿಗೆ ಆಯುಕ್ತರ ಪತ್ರ ಸಂಖ್ಯೆ: ಸಾಆ/ ಸಿಬ್ಬಂದಿ/ ಪಿಆರ್-220/ 2005-2006, ದಿನಾಂಕ: 12.12.2005 ಮತ್ತು ದಿನಾಂಕ: 22.12.2005.

**ಪ್ರಸ್ತಾವನೆ:**

ಸಾರಿಗೆ ಇಲಾಖೆಯು ಕರ್ನಾಟಕ ಸರ್ಕಾರದ ರಾಜಸ್ವ ಸಂಗ್ರಹಣೆಯ ಒಂದು ಅವಿಭಾಜ್ಯ ಅಂಗವಾಗಿದೆ. ಸಾರಿಗೆ ಇಲಾಖೆಯು 1985ರಲ್ಲಿ 97.01 ಕೋಟಿ ರೂ.ಗಳ ರಾಜಸ್ವ ಸಂಗ್ರಹಣೆ ಮಾಡುತ್ತಿದ್ದು, 2006ರ ವೇಳೆಗೆ ಸುಮಾರು 1078 ಕೋಟಿ ರೂ.ಗಳಿಗೆ ಹಾಗೂ ವಾಹನ ಚಾಲನಾ ಅನುಜ್ಞಾ ಪತ್ರ 6,92,288 ಇದ್ದು 2005 ಸೆಪ್ಟೆಂಬರ್ ವೇಳೆಗೆ 54,78,345 ತಲುಪಿರುತ್ತದೆ. ಬೆಂಗಳೂರಿನಲ್ಲಿರುವ ಪ್ರತಿಯೊಂದು ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗೆ ಪ್ರತಿದಿನ ಅಂದಾಜು 400 ರಿಂದ 500 ಸಾರ್ವಜನಿಕರು ನಾನಾ ರೀತಿಯ ಕೆಲಸಗಳಿಗೆ ಬಂದು ಹೋಗುತ್ತಿರುತ್ತಾರೆ.

ದಿನಂಪ್ರತಿ ಬೆಂಗಳೂರಿನಲ್ಲಿ ವಾಹನಗಳ ದಟ್ಟಣೆ ಹೆಚ್ಚುತ್ತಿದ್ದು ಇದರಿಂದ ತೆರಿಗೆ ಸಂಗ್ರಹಣೆಯು ಸಹ ಸಮಾನಾಂತರವಾಗಿ ಹೆಚ್ಚುತ್ತಿರುತ್ತದೆ. ಸಾರ್ವಜನಿಕರು ಸಾರಿಗೆ ಇಲಾಖೆಯಿಂದ ಉತ್ತಮ ಸೇವೆಯನ್ನು ಅಪೇಕ್ಷಿಸುತ್ತಿರುವ ಹಿನ್ನೆಲೆಯಲ್ಲಿ ಸರ್ಕಾರ ಈ ಹಿಂದೆ ಇದ್ದ ಐದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಗಳ ಜೊತೆಗೆ ಐದು ಹೊಸ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳನ್ನು ಬೆಂಗಳೂರುನಗರ ಹಾಗೂ ಗ್ರಾಮಾಂತರ ಪ್ರದೇಶದಲ್ಲಿ ಸ್ಥಾಪಿಸಲಾಗಿದೆ.

ಇಂದಿನವರೆವಿಗೂ ಬೆಂಗಳೂರು (ನಗರ ಹಾಗೂ ಗ್ರಾಮಾಂತರ) ಜಿಲ್ಲೆಗಳನ್ನು ಕೆಲವಾರು ಜಿಲ್ಲೆಗಳ ಜೊತೆಯೊಂದಿಗೆ ಇಲಾಖಾ ಆಡಳಿತವನ್ನು ಒಬ್ಬ ಉಪ ಸಾರಿಗೆ ಆಯುಕ್ತರು ನೋಡಿಕೊಳ್ಳುತ್ತಿದ್ದಾರೆ. ಬೆಂಗಳೂರು ನಗರದಲ್ಲಿ ವಾಹನಗಳ ನಿರ್ವಹಣೆ ಮತ್ತು ಹೆಚ್ಚಿನ ರಾಜಸ್ವ ಸಂಗ್ರಹಣೆಯ ಪ್ರಾಮುಖ್ಯತೆಯ ಹಿನ್ನೆಲೆಯಲ್ಲಿ ಬೆಂಗಳೂರು (ನಗರ ಹಾಗೂ ಗ್ರಾಮಾಂತರ) ಜಿಲ್ಲೆಯಲ್ಲಿರುವ ಹತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿ ಹಾಗೂ ಎರಡು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳಿಗೆ ಅನ್ವಯವಾಗುವಂತೆ ಓರ್ವ ಜವಾಬ್ದಾರಿಯುತ ಹಿರಿಯ ಅಧಿಕಾರಿಯ ಅವಶ್ಯಕತೆ ಇರುತ್ತದೆ. ಆದುದರಿಂದ ಬೆಂಗಳೂರು (ನಗರ ಹಾಗೂ ಗ್ರಾಮಾಂತರ) ಜಿಲ್ಲೆಗಳಲ್ಲಿರುವ ಹತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳು ಹಾಗೂ ಎರಡು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳ ರಾಜಸ್ವ ಸಂಗ್ರಹಣೆ, ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ವಿಶೇಷವಾಗಿ ನೋಡಿಕೊಳ್ಳಲು ಒಂದು ಜಂಟಿ ಸಾರಿಗೆ ಆಯುಕ್ತರನ್ನು ನೇಮಿಸುವುದು ಅವಶ್ಯವಿದ್ದು ಬೆಂಗಳೂರು (ನಗರ ಹಾಗೂ ಗ್ರಾಮಾಂತರ) ಜಿಲ್ಲೆಗಳಿಗೆ ಒಂದು ಜಂಟಿ ಸಾರಿಗೆ ಆಯುಕ್ತರ ಹುದ್ದೆಯನ್ನು ಸೃಜಿಸಲು ಪ್ರಸ್ತಾಪಿಸಲಾಗಿದೆ.

ಇದರ ಪರಿಣಾಮವಾಗಿ ಈಗಾಗಲೇ ಇರುವ ಬೆಂಗಳೂರು ಉಪ ಸಾರಿಗೆ ಆಯುಕ್ತರವರನ್ನು ಉಪ ಸಾರಿಗೆ ಆಯುಕ್ತರು (ಗ್ರಾಮಾಂತರ) ಬೆಂಗಳೂರು ಎಂದು ನಾಮಾಂಕಿತಗೊಳಿಸಿ ಬೆಂಗಳೂರು (ನಗರ ಹಾಗೂ ಗ್ರಾಮಾಂತರ) ಜಿಲ್ಲೆಗಳನ್ನು ಹೊರತುಪಡಿಸಿ ಈ ಹಿಂದೆ ಮೇಲುಸ್ತುವಾರಿ ನೋಡಿಕೊಳ್ಳುತ್ತಿದ್ದಂತಹ ಉಳಿದ ಅಂದರೆ ತುಮಕೂರು, ಕೋಲಾರ, ರಾಮನಗರ, ದೇವನಹಳ್ಳಿ, ಚಿಕ್ಕಬಳ್ಳಾಪುರ, ಕೆ.ಜಿ.ಎಫ್, ಬಾಗೇಪಲ್ಲಿ ತನಿಖಾಠಣೆ, ನಂಗ್ಲಿ ತನಿಖಾಠಾಣೆ, ಗೌರಿಬಿದನೂರು ತನಿಖಾಠಾಣೆ, ರಾಯಲ್‌ಪಾಡ್ ತನಿಖಾಠಾಣೆಗಳ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳು/ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳು ಹಾಗೂ ತನಿಖಾ ಠಾಣೆಗಳ ಉಸ್ತುವಾರಿ ನೋಡಿಕೊಳ್ಳಲು ಪ್ರಸ್ತಾಪಿಸಿ ಸಾರಿಗೆ ಆಯುಕ್ತರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ.

ಮೇಲ್ಕಂಡ ಸಾರಿಗೆ ಆಯುಕ್ತರ ಪ್ರಸ್ತಾವನೆಗಳನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ, ಸಾರಿಗೆ ಆಯುಕ್ತರು ಪ್ರಸ್ತಾಪಿಸಿರುವ ಜಂಟಿ ಸಾರಿಗೆ ಆಯುಕ್ತರು ಹುದ್ದೆ ಅವಶ್ಯವಿದೆಯೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಸಾರಿಇ 335 ಸಾಇಸೇ 2005, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್, 2006

### (ಯೂನಿಕ ಕ್ರಮ ಸಂಖ್ಯೆ: ಸಾರಿಇ 292 ಸ್ವೀರಸ 2006, ದಿನಾಂಕ: 3ನೇ ಏಪ್ರಿಲ್, 2006

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆಗಳಲ್ಲಿರುವ ಪ್ರಾದೇಶಿಕ ಸಾರಿಗೆ ಅಧಿಕಾರಿ / ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳಿಗೆ ಅನ್ವಯಿಸುವಂತೆ ಒಂದು ಜಂಟಿ ಸಾರಿಗೆ ಆಯುಕ್ತರ ಹುದ್ದೆಯನ್ನು ವೇತನ ಶ್ರೇಣಿ 10620-14,960ರಲ್ಲಿರುವಂತೆ ಸೃಜಿಸಲಾಗಿದೆ. ಹೊಸದಾಗಿ ಸೃಜಿಸಲಾದ ಜಂಟಿ ಸಾರಿಗೆ ಆಯುಕ್ತರ ಹುದ್ದೆಯನ್ನು 'ಜಂಟಿ ಸಾರಿಗೆ ಆಯುಕ್ತರು (ಬೆಂಗಳೂರು ನಗರ ಮತ್ತು ಗ್ರಾಮಾಂತರ)' ಎಂದು ಪದ ನಾಮಾಂಕಿತಗೊಳಿಸಿ, ಸದರಿ ಹುದ್ದೆಗೆ ಅನ್ವಯವಾಗುವಂತೆ ಬೆಂಗಳೂರು ನಗರ ಜಿಲ್ಲೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಈ ಕೆಳಕಂಡ ಜವಾಬ್ದಾರಿಗಳ ನಿಯಂತ್ರಣ ಮತ್ತು ಮೇಲುಸ್ತುವಾರಿಯನ್ನು ವಹಿಸಲಾಗಿದೆ:

i) ಎಲ್ಲಾ RTO/ ARTO ಕಛೇರಿಗಳ Revenue Collection ಚಟುವಟಿಕೆಗಳು ಹಾಗೂ ಸಾಮಾನ್ಯ ಆಡಳಿತ ನಿರ್ವಹಣೆ;

ii) ರಸ್ತೆ ಸುರಕ್ಷತೆ;

iii) ಮೋಟಾರು ವಾಹನ ಕಾಯ್ದೆಯಡಿ ಮಾಡುವಂತೆ ಆದೇಶಗಳ ಮೇಲೆ ಅಪೀಲು ಕೇಳುವುದು ಮತ್ತು ನಿರ್ಣಹಿಸುವುದು. ಜಂಟಿ ಸಾರಿಗೆ ಆಯುಕ್ತರ ಹುದ್ದೆ ಸೃಜನೆಯಿಂದ ಈಗಾಗಲೇ ಇರುವ ಬೆಂಗಳೂರು ಉಪ ಸಾರಿಗೆ ಆಯುಕ್ತರನ್ನು ಬೆಂಗಳೂರು (ಗ್ರಾಮಾಂತರ) ಎಂದು ನಾಮಾಕರಣಗೊಳಿಸಿ ಬೆಂಗಳೂರು (ನಗರ ಮತ್ತು ಗ್ರಾಮಾಂತರ) ಜಿಲ್ಲೆಗಳಲ್ಲಿರುವ ಪ್ರಾದೇಶಿಕ ಸಾರಿಗೆ ಅಧಿಕಾರಿ/ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳನ್ನು ಹೊರತುಪಡಿಸಿ ಉಳಿದ ಅಂದರೆ ತುಮಕೂರು, ಕೋಲಾರ, ತಿಪಟೂರು, ಚಿಕ್ಕಬಳ್ಳಾಪುರ, ಕೆ.ಜಿ.ಎಫ್, ಪ್ರಾದೇಶಿಕ ಸಾರಿಗೆ ಅಧಿಕಾರಿ/ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳು ಹಾಗೂ ಬಾಗೇಪಲ್ಲಿ, ನಂಗ್ಲಿ, ಗೌರಿಬಿದನೂರು, ರಾಯಲ್‌ಪಾಡ್ ತನಿಖಾಠಾಣೆಗಳ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳು ಹಾಗೂ ತನಿಖಾ ಠಾಣೆಗಳ ಉಸ್ತುವಾರಿ ನೋಡಿಕೊಳ್ಳುವಂತೆ ಹಾಗೂ ಈಗಾಗಲೇ ನಿರ್ವಹಿಸುತ್ತಿರುವ ಕರ್ತವ್ಯ ಮತ್ತು ವಹಿಸಿರುವ ಅಧಿಕಾರಗಳನ್ನು ಚಲಾವಣೆ ಮಾಡಲು ಮೇಲಿನ ಕಾರ್ಯವ್ಯಾಪ್ತಿ ನೀಡಲಾಗಿದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿ ಹಾಗೂ ಅತ್ತಿಬೆಲೆ ತನಿಖಾಠಾಣೆಯ ನೇರ ಉಸ್ತುವಾರಿಯನ್ನು ಜಂಟಿ ಸಾರಿಗೆ ಆಯುಕ್ತರು (ಗುಪ್ತದಳ ಮತ್ತು ವಾಯುಮಾಲಿನ್ಯ) ರವರಿಗೆ ವಹಿಸಲಾಗಿದೆ.

ಜಂಟಿ ಸಾರಿಗೆ ಆಯುಕ್ತರು (ಬೆಂಗಳೂರು ನಗರ ಮತ್ತು ಗ್ರಾಮಾಂತರ) ಇವರು ಸ್ವತಂತ್ರವಾಗಿ ಕರ್ತವ್ಯ ನಿರ್ವಹಿಸುತ್ತಾ ಸಾರಿಗೆ ಆಯುಕ್ತರ ಮೇಲುಸ್ತುವಾರಿ ಮತ್ತು ನಿಯಂತ್ರಣಕ್ಕೊಳಪಡುತ್ತಾರೆ.

ಜಂಟಿ ಸಾರಿಗೆ ಆಯುಕ್ತರು (ಬೆಂಗಳೂರು ನಗರ ಮತ್ತು ಗ್ರಾಮಾಂತರ) ಇವರಿಗೆ ಅಗತ್ಯವಿರುವ ಸಹಾಯಕ ಸಿಬ್ಬಂದಿಯನ್ನು redeployment ಮೂಲಕ ಸಾರಿಗೆ ಆಯುಕ್ತರು ಒದಗಿಸತಕ್ಕದ್ದು.

ಸದರಿ ಹುದ್ದೆಯ ಸೃಜನೆಯಿಂದ ಉಂಟಾಗಬಹುದಾದ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2041- ವಾಹನ ತೆರಿಗೆಗಳು-00-101-ವಸೂಲಿ ವೆಚ್ಚ" ಅಡಿಯಲ್ಲಿ ಭರಿಸತಕ್ಕದ್ದು.

ಈ ಮೇಲ್ಕಂಡ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 47 ವೆಚ್ಚ-6: 2006, ದಿನಾಂಕ: 21.02.2006ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವರಾಮ ಶೆಟ್ಟಿ**
ಪೀಠಾಧಿಕಾರಿ,
ಸಾರಿಗೆ ಇಲಾಖೆ.

ಪಿ.ಆರ್.526

## INFRASTRUCTURE DEVELOPMENT SECRETARIAT

**Sub:** Release of funds towards the 4th draw down of the State Support to Bangalore International Airport Project.

**Read:** (1) G.O. No. IDD 11 DIA 2005 Dated: 22.06.2005.
(2) G.O. No. IDD 11 DIA 2005 Dated: 16.09.2005.
(3) G.O. No. IDD 11 DIA 2005 Dated: 20.12.2005.
(4) Letter Dated: 9th Feb 2006/ Shiv of the CEO BIAL.
(5) G.O. No. IDD 11 DIA 2005 Dated: 27.03.2006.
(6) G.O. No. FD 223 BRS 2006 Dated: 29.03.2006.

**Preamble:**

In G.O. Dated: 22.06.2005 read at Sl.No. (1) Above, an amount of Rs. 45.71 crores was released to KSIIDC towards the 1st installment of draw down for the State Support to the Bangalore International Airport Project for the year 2005-06. In G.O. Dated: 16.09.2005 read at Sl.No. 2 above an amount of Rs.14.10 crores was released to KSIIDC towards 2nd draw down for the State Support to BIAP for the year 2005-06. In G.O. Dated: 20.12.2005 read at Sl.No.3 above, an amount of Rs.13.08 crores was released to KSIIDC towards 3rd draw down for the State Support to Bangalore. INternational Airpport Limited for the year 2005-06. In the letter read at Sl.No. (4) above, the Chief Executive Officer, Bangalore International Airport Limited had requested for release of an amount of Rs.24.28 crores towards the 4th installment of draw down schedule for the State Support to Bangalore International Airport Project for the period March 2006. As there was a balance of Rs. 22.26 crores was remaining in the particular head of account and to facilitate release of atleast the available funds. in G.O. dated: 27.03.2006 read at Sl.No.(5) above, Rs.22.26 crores was released towards the 4th installment of the draw down of the State Support to the Bangalore International Project. In the G.O. read at Sl.No. (6) above, the FD has approved for reappropriation of Rs.2.02 crores from the savings under the head of account "5465-01-190-2-01-211- KSIIDC Investments". Hence the following order.

**G.O. No. IDD 11 DIA 2005, Bangalore, Dated: 31st March, 2006**

In the circumstances explained in the preamble. Government after careful examination and in continuation of in G.O. Dated: 27.03.2006 is pleased to release Rs.2.02 crores towards the remaining balance of the total sum of Rs. 24.28 crores (Rupees Twenty Four Crores and Twenty Eight Lakhs only) to KSIIDC towards the 4th installment of the draw down of the State Support to the Bangalore International Airport Project for the period March 2006 by reappropriation from the savings under the head of account "5465-01-190-2-01-211- KSIIDC Investment" of Rs.2.02 crores (Rupees Two Crores and Two

lakhs only) to the head of "5465-01-190-2-02- (Plan) BIAL- State Support to project"-100 "Financial Assistance/ Relief".

2. The Managing Director, KSIIDC is authorized to draw the above amount of Rs.2.02 crores (Rupees Two Crores and Two lakhs) only on a payees receipt Counter signed by the Under Secretary to Government, Infrastructure Development Department.

3. This order issues with the concurrence of Finance Department in U.O. Note No. FD 688 Exp-1/ 2005 dated: 31.03.2006. This amount is excempted up to 31.03.2006 from presentation of Bill after cut-off date.

By Order and in the name of Governor of Karnataka,

**T.B. RENUKAPRASAD**

PR-527

Under Secretary to Government,

Infrastructure Development Department.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆ ಬಸವ ಕಲ್ಯಾಣದಲ್ಲಿ ದಿವಂಗತ ಬಿ.ಡಿ. ಜತ್ತಿ ರವರ ಪ್ರತಿಮೆ ನಿರ್ಮಾಣಕ್ಕೆ ಅನುದಾನ ಮಂಜೂರಾತಿ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಸನಿ 18/ ಪ್ರತಿಮೆ 2003-04, ದಿನಾಂಕ: 23.07.2005 ಮತ್ತು ದಿನಾಂಕ: 25.02.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಪತ್ರಗಳಲ್ಲಿ ದಿವಂಗತ: ಬಿ.ಡಿ. ಜತ್ತಿ ಯವರ ಪ್ರತಿಮೆಯನ್ನು ಬೀದರ್ ಬಸವ ಕಲ್ಯಾಣದಲ್ಲಿ ನಿರ್ಮಾಣ ಮಾಡಲು ರೂ.5.00 ಲಕ್ಷ ರೂಪಾಯಿಗಳ ಅನುದಾನ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಜಿಲ್ಲಾಧಿಕಾರಿಗಳು. ಬೀದರ್ ಇವರು ಬೀದರ್ ಜಿಲ್ಲಾಧಿಕಾರಿಗೆ ಸೇರಿದ ಬಸವ ಕಲ್ಯಾಣದಲ್ಲಿ ದಿವಂಗತ ಬಿ.ಡಿ. ಜತ್ತಿ ರವರ ಪ್ರತಿಮೆ ನಿರ್ಮಾಣದ 6.00 ಲಕ್ಷ ರೂಪಾಯಿಗಳ ಅಂದಾಜು ಪಟ್ಟಿ, ನೀಲಿ ನಕಾಶೆ ಹಾಗೂ ಸಭೆ ನಡವಳಿಯೊಂದಿಗೆ ದಾಖಲಾತಿಗಳನ್ನು ಸಲ್ಲಿಸಿರುವುದಾಗಿ ನಿರ್ದೇಶಕರು ತಿಳಿಸಿರುತ್ತಾರೆ. ದಿವಂಗತ ಬಿ.ಡಿ. ಜತ್ತಿ ರವರ ಪ್ರತಿಮೆಯನ್ನು ಪಂಚ ಲೋಹದಿಂದ ಮಾಡುವುದಾಗಿಯೂ ಹಾಗೂ ಸದರಿ ಪ್ರತಿಮೆಯ ಎತ್ತರ 6 ಅಡಿ ಇರುವುದಾಗಿಯೂ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. ಮುಂದುವರೆದು ದಿವಂಗತ: ಬಿ.ಡಿ.ಜತ್ತಿ ರವರ ಪ್ರತಿಮೆ ನಿರ್ಮಾಣ ಅನುಷ್ಠಾನ ಕಾರ್ಯವನ್ನು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ ಹಾಗೂ ಸಹಾಯಕ ಆಯುಕ್ತರು, ಬಸವ ಕಲ್ಯಾಣ ಇವರಿಂದ ಅನುಷ್ಠಾನಗೊಳಿಸಲಾಗುತ್ತದೆ ಎಂದು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಆದೇಶ ಸಂಖ್ಯೆ: ಸಂಕಇ 40 ಸಾಪ್ರನಿ 2005, ಬೆಂಗಳೂರು, ದಿನಾಂಕ:23ನೇ ಮಾರ್ಚ್, 2006**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಬೀದರ್ ಜಿಲ್ಲೆ ಬಸವ ಕಲ್ಯಾಣದಲ್ಲಿ ದಿವಂಗತ ಬಿ.ಡಿ. ಜತ್ತಿ ರವರ ಪ್ರತಿಮೆಯನ್ನು ನಿರ್ಮಾಣ ಮಾಡಲು ರೂ.5.00 ಲಕ್ಷ (ರೂಪಾಯಿ ಐದು ಲಕ್ಷ ರೂಪಾಯಿಗಳನ್ನು ಮಾತ್ರ) ಅನುದಾನವನ್ನು ಬೀದರ್ ಜಿಲ್ಲಾಧಿಕಾರಿಗಳಿಗೆ ಈ ಕೆಳಕಂಡ ಷರತ್ತುಗಳನ್ವಯ ಬಿಡುಗಡೆ ಮಾಡಲು ಮಂಜೂರು ಮಾಡಿದೆ.

1. ಸರ್ಕಾರವು ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸುವುದು.
2. ಸರ್ಕಾರ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರ ಹಾಗೂ ಮುಕ್ತಾಯ ದೃಢೀಕರಣ ಪತ್ರ ಸಲ್ಲಿಸುವುದು.
3. ಈ ಕಾಮಗಾರಿಯನ್ನು ಕೂಡಲೇ ಕೈಗೆತ್ತಿಕೊಂಡು ಆರು (6) ತಿಂಗಳೊಳಗಾಗಿ ಮುಕ್ತಾಯಗೊಳಿಸುವುದು.
4. ಉಳಿದ ಅಗತ್ಯವಿರುವ ಹಣವನ್ನು ಸಾರ್ವಜನಿಕ ದೇಣಿಗೆಯಿಂದ ಸಂಗ್ರಹಿಸಿ ಪ್ರಸ್ತುತ ಕಾಮಗಾರಿಯನ್ನು ಮುಕ್ತಾಯಗೊಳಿಸುವುದು.
5. ಈ ಯೋಜನೆಗೆ ಈಗ ಮಂಜೂರು ಮಾಡಿರುವ ರೂ.5.00 ಲಕ್ಷಗಳ ಇಡುಗಂಟು ಅನುದಾನ ಸೀಮಿತಗೊಳಿಸಿದೆ.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ "4202-04-800-1-02-139 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ: ಶಿ.ಇ. 302 ಐ.ಎ.ಎಫ್. (ಬಿ.ಎ.) 2006 ದಿನಾಂಕ: 17.03.2006ರಲ್ಲಿ ನೀಡಿರುವ ಸಹಮತಿ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ.1 ಟಿ.ಎಫ್.ಪಿ. 96, ದಿನಾಂಕ: 10.07.96 ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್.528

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ. (ಆಡಳಿತ ಕನ್ನಡ)

## ಶಿಕ್ಷಣ ಸಚಿವಾಲಯ

**ವಿಷಯ:** ಕನ್ನಡ ಪುಸ್ತಕಗಳ ಡಿಜಿಟೈಸೇಷನ್ ಕಾರ್ಯಕ್ಕಾಗಿ 11.50 ಲಕ್ಷ ರೂ.ಗಳ ವೆಚ್ಚದಲ್ಲಿ ಕಂಪ್ಯೂಟರ್ ಹಾಗೂ ಪರಿಕರಗಳನ್ನು ಕೊಳ್ಳಲು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಅವರಿಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ: ಇಡಿ: 136: ಯೋಯೋಕ 2005: ದಿನಾಂಕ:01.04.2005 (ಇಡಿ:4:ಸ್ಪೀಮರ: (ಯೂನಿಕ್) 2005, ದಿನಾಂಕ: 01.04.2005)

(2) ಸರ್ಕಾರಿ ಆದೇಶ ಸಂಖ್ಯೆ: ಇಡಿ: 160: ಯೋಯೋಕ 2005: ದಿನಾಂಕ: 17.05.2005 (ಇಡಿ: ಸ್ಪೀಮರ: (ಯೂನಿಕ್) 2005, ದಿನಾಂಕ: 17.05.2005)

(3) ನಿರ್ದೇಶಕರು, ಸಾ.ಗ್ರಂ. ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಸಾಗ್ರಂ/ ನಿಕ/ ಯೋವಿ/ 20070/ 2005-06, ದಿನಾಂಕ: 01.03.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಲೆಕ್ಕ ಶೀರ್ಷಿಕೆ 2205-00-105-0-04 (ಯೋಜನೆ) ಅಡಿಯಲ್ಲಿ ರೂ.270.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹೊಸ ಘಟಕಗಳ ವೆಚ್ಚಕ್ಕೆ ರೂ.18.50 ಲಕ್ಷಗಳ ಮಂಜೂರಾತಿ ನೀಡಲಾಗಿರುತ್ತದೆ. ಈ ಮೊತ್ತದಲ್ಲಿ ಬಾಕಿ ಉಳಿದ ಮೊತ್ತ ರೂ.11.50 ಲಕ್ಷಗಳನ್ನು ಕನ್ನಡ ಪುಸ್ತಕಗಳ ಡಿಜಿಟೈಸೇಷನ್ ಕಾರ್ಯಕ್ಕಾಗಿ ಬೇಕಾಗುವ ಗಣಕ ಯಂತ್ರಗಳು ಹಾಗೂ ಪೂರಕ ಉಪಕರಣಗಳ ಖರೀದಿಗಾಗಿ ವೆಚ್ಚಮಾಡಲು, ಗಣಕಯಂತ್ರಗಳು ಹಾಗೂ ಪೂರಕ ಸಾಮಗ್ರಿಗಳ ಖರೀದಿ ಬಗ್ಗೆ ಡಿ.ಎ.ಪಿ. ಸಮಿತಿ ಇ-ಆಡಳಿತದಿಂದ ಅನುಮೋದನೆ ದೊರೆತಿರುತ್ತದೆ ಎಂದು ಸಾರ್ವಜನಿಕ ಗ್ರಂಥಾಲಯ ಇಲಾಖೆ ನಿರ್ದೇಶಕರು, ಬೆಂಗಳೂರು ಅವರು ಮೇಲೆ (3)ರಲ್ಲಿ ಓದಲಾದ 01.03.2006ರ ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ. ಆದುದರಿಂದ ಗಣಕ ಯಂತ್ರಗಳ ಖರೀದಿಗಾಗಿ ವೆಚ್ಚ ಮಾಡಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 68 ಯೋಯೋಕಾ 2006, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2006**

**(ಇಡಿ: 37: ಸ್ವೀಮರ (ಯುನಿಕ್) 2006, ದಿನಾಂಕ: 29ನೇ ಮಾರ್ಚ್, 2006**

ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಆಯವ್ಯಯ ಶೀರ್ಷಿಕೆ 2205-00-105-0-04-059 (ಯೋಜನೆ) ಯಡಿಯಲ್ಲಿ ನಿಗದಿಯಾಗಿರುವ ಆಯವ್ಯಯದ ಮಿತಿಯೊಳಗೆ ರೂ.11.50 ಲಕ್ಷಗಳಲ್ಲಿ (ರೂ. ಹನ್ನೊಂದುಲಕ್ಷ ಐವತ್ತು ಸಾವಿರಗಳು ಮಾತ್ರ) ಕನ್ನಡ ಪುಸ್ತಕಗಳ ಡಿಜಿಟೈಸೇಷನ್ ಕಾರ್ಯಕ್ಕಾಗಿ ಅಗತ್ಯವಿರುವ ಗಣಕ ಯಂತ್ರಗಳು ಹಾಗೂ ಪೂರಕ ಉಪಕರಣಗಳ ಖರೀದಿಗಾಗಿ ವೆಚ್ಚಮಾಡಲು, ಈ ಕೆಳಕಂಡ ಷರತ್ತಿಗೊಳಪಟ್ಟು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರಿಗೆ ಅನುಮೋದನೆಯನ್ನು ನೀಡಲಾಗಿದೆ.

1. ರೂ.11.50 ಲಕ್ಷಗಳನ್ನು ವೆಚ್ಚ ಮಾಡಲು ಟಿಎಪಿ ಅನುಮೋದನೆಯನ್ನು ಪಡೆದಿರಬೇಕು ಹಾಗೂ ಅವುಗಳನ್ನು ಖರೀದಿಸುವ ಮುನ್ನ ಟಿಎಪಿ ಅನುಮೋದನೆ ದೊರಕಿರುವುದನ್ನು ಖಚಿತ ಪಡಿಸಿಕೊಳ್ಳತಕ್ಕದ್ದು.

2. ಗಣಕಯಂತ್ರಗಳು ಪೂರಕ ಉಪಕರಣಗಳ ಖರೀದಿಗಾಗಿ ಟಿಎಪಿ ಸಮಿತಿ ಹಾಗೂ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆ ಇ- ಆಡಳಿತಕ್ಕೆ ಸಂಬಂಧಿಸಿದ ರಾಜ್ಯಮಟ್ಟದ ಉನ್ನತಾಧಿಕಾರಿ ಸಮಿತಿಯಿಂದ ಅನುಮತಿ ಪಡೆದಿರುವುದನ್ನು ಖಚಿತ ಪಡಿಸಿಕೊಳ್ಳಬೇಕು.

3. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-105-0-04-59 ಯೋಜನೆ ಅಡಿಯಲ್ಲಿ ನಿಗದಿಯಾಗಿರುವ ಹಣದ ಮಿತಿಯೊಳಗೆ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಶಿಕ್ಷಣ ಇಲಾಖೆ ರವರ ಅ.ಟಿ. ಸಂಖ್ಯೆ: ಇಡಿ: 271: ಐಎಫ್ (ಬಿಎ) 2006: ದಿನಾಂಕ: 25.03.2006ರಲ್ಲಿ ಸಹಮತಿಯನ್ನು ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.542

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ
ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

**ವಿಷಯ:** ವೃತ್ತಿ ಶಿಕ್ಷಣ ಇಲಾಖೆ ವ್ಯಾಪ್ತಿಯ 100 ವೃತ್ತಿ ಶಿಕ್ಷಣ ಕಾಲೇಜುಗಳಿಗೆ ಯಂತ್ರೋಪಕರಣ, ಸಾಧನ-ಸಾಮಗ್ರಿ ಕಾರ್ಯಾಗಾರ ದುರಸ್ತಿ ಇತ್ಯಾದಿಗಳಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರದ ಸಂಖ್ಯೆ: ಡಿವಿಇ/ ನಿಆಶಾ/ 2005-06, ದಿನಾಂಕ: 28.02.2006.

**ಪ್ರಸ್ತಾವನೆ:**

ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ: 28.02.2006ರ ತಮ್ಮ ಪತ್ರದಲ್ಲಿ 2005-06ನೇ ಸಾಲಿಗೆ ಇಲಾಖೆಯ ಯೋಜನಾ ಲೆಕ್ಕ ಶೀರ್ಷಿಕೆ 2202-02-800-4-00ರಲ್ಲಿ ನಿಗದಿಪಡಿಸಿದ್ದ 980/- ಲಕ್ಷ ರೂ.ಗಳ ಅನುದಾನದಲ್ಲಿ ವೇತನಕ್ಕಾಗಿ ನಿಗದಿಪಡಿಸಿದ ಅನುದಾನವನ್ನು ಹೊರತುಪಡಿಸಿ ಉಳಿಯುವ 15 ಲಕ್ಷ ರೂ.ಗಳನ್ನು ಯಂತ್ರೋಪಕರಣ, ಸಾಧನ-ಸಾಮಗ್ರಿ, ಕಾರ್ಯಾಗಾರ ದುರಸ್ತಿ ಇತ್ಯಾದಿಗಳಿಗಾಗಿ ಪ್ರತಿ ಕಾಲೇಜಿಗೆ 15 ಸಾವಿರ ರೂ.ಗಳಂತೆ 100 ವೃತ್ತಿ ಶಿಕ್ಷಣ ಕಾಲೇಜುಗಳಿಗೆ ಬಿಡುಗಡೆ ಮಾಡಲು ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಇಡಿ 57 ಯೋಯೋಕಾ 2006, ಬೆಂಗಳೂರು, ದಿನಾಂಕ:17ನೇ ಮಾರ್ಚ್, 2006**

**(ಇಡಿ: 30: ಸ್ವೀಮರ (ಯುನಿಕ್) 2006, ದಿನಾಂಕ:17ನೇ ಮಾರ್ಚ್, 2006**

ಸರ್ಕಾರವು ವೃತ್ತಿ ಶಿಕ್ಷಣ ಇಲಾಖೆಗೆ 2005-06ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2202-02-800-4-00 (ಯೋಜನೆ) ಯಲ್ಲಿ ನಿಗದಿಪಡಿಸಿರುವ ಅನುದಾನದಲ್ಲಿ ಉಳಿಯುವ 15 ಲಕ್ಷ ರೂ.ಗಳನ್ನು ತಲಾ 15 ಸಾವಿರ ರೂ.ಗಳಂತೆ ರಾಜ್ಯದಲ್ಲಿರುವ 100 ವೃತ್ತಿ ಶಿಕ್ಷಣ ಕಾಲೇಜುಗಳಿಗೆ ಯಂತ್ರೋಪಕರಣ, ಸಾಧನ-ಸಾಮಗ್ರಿ ಖರೀದಿ, ಕಾರ್ಯಾಗಾರ ವೆಚ್ಚ ಇತ್ಯಾದಿಗಳಿಗಾಗಿ ಬಿಡುಗಡೆ ಮಾಡಲು ವೃತ್ತಿ ಶಿಕ್ಷಣ ಇಲಾಖೆ ನಿರ್ದೇಶಕರಿಗೆ ಈ ಮೂಲಕ ಅನುಮತಿ ನೀಡುತ್ತದೆ. ಹಣವನ್ನು ಬ್ಯಾಂಕ್ ಡ್ರಾಫ್ಟ್ ಅಥವಾ ಎಲೆಕ್ಟ್ರಾನಿಕ್ ಕ್ಲಿಯರೆನ್ಸ್ ಸಿಸ್ಟಮ್‌ನ ಮೂಲಕ ಬಿಡುಗಡೆ ಮಾಡತಕ್ಕದ್ದು.

ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ. ಸಂಖ್ಯೆ: ಶಿಇ 207 ಐಎಫ್ (ಬಿಎ) 2006, ದಿನಾಂಕ: 16.03.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.560

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ
ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಸಿದ್ದೇಗೌಡ, ಸಿಪಿಸಿ-17, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :** (1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಮಂಡ್ಯ ಉಪ ವಿಭಾಗ, ಮಂಡ್ಯ ಇವರ ಆದೇಶ ಸಂಖ್ಯೆ: ಎಸ್‌ಡಿಪಿಓ/ ಪಿಆರ್/ 104/ 2004, ದಿನಾಂಕ: 24.08.2004.

(2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ: ಅಪೀಲು/ 33/ 04-05, ದಿನಾಂಕ: 18.01.2005.

(3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23.09.2005.

(4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು/ 2/ 131/ 2005, ದಿನಾಂಕ: 31.01.2006.

**ಪ್ರಸ್ತಾವನೆ:**

ಶ್ರೀ ಸಿದ್ದೇಗೌಡ, ಸಿಪಿಸಿ-17, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

"ದಿನಾಂಕ:20.07.2004ರಂದು ನಿಮಗೆ ಠಾಣೆಯಿಂದ ಪಿಎಸ್‌ಐ ರವರು ಗುಪ್ತ ಮಾಹಿತಿ ಸಂಗ್ರಹಿಸಿ ಪಿಎಸ್‌ಐ ರವರಿಗೆ ಹಾಗೂ ಹಿರಿಯ ಅಧಿಕಾರಿಗಳಿಗೆ ಮಾಹಿತಿ ನೀಡುವಂತೆ ಸೂಕ್ತ ತಿಳುವಳಿಕೆ ನೀಡಿ ಕರ್ತವ್ಯಕ್ಕೆ ನೇಮಕ ಮಾಡಿದ್ದು, ಅದೇ ದಿನ ಬಿರುಕು ದೈನಂದಿನ ಪತ್ರಿಕೆಯಲ್ಲಿ ಪ್ರಕಟಗೊಂಡಿರುವ ವಿಷಯದ ಬಗ್ಗೆ ಮಾಹಿತಿ ಸಂಗ್ರಹಿಸಿ ನೀವು ಪಿಎಸ್‌ಐ ರವರಿಗೆ ಹಾಗೂ ಹಿರಿಯ ಅಧಿಕಾರಿಯವರಿಗೆ ಮಾಹಿತಿ ನೀಡದೆ ಇದ್ದುದರಿಂದ, ನಾಗಮಂಗಲ ಪೊಲೀಸ್ ಠಾಣೆಯಲ್ಲಿ 98/ 2004 ಮತ್ತು 99/2004 ಪ್ರಕರಣಗಳು ವರದಿಯಾಗಿರುತ್ತವೆ. ನಾಗಮಂಗಲ ಠಾಣಾ ವ್ಯಾಪ್ತಿಯು ಒಂದು ಹಿಂದು-ಮುಸ್ಲಿಂ ಕೋಮುವಾದಿಯ ಸೂಕ್ಷ್ಮ ಪ್ರದೇಶವಾಗಿದ್ದು ನೀವು ಠಾಣಾ ವ್ಯಾಪ್ತಿಯ ಗುಪ್ತ ಮಾಹಿತಿಯನ್ನು ಸರಿಯಾಗಿ ಸಂಗ್ರಹಿಸದೆ, ಉದ್ರಿಕ್ತ ಪರಿಸ್ಥಿತಿ ಉಂಟಾಗಲು ಕಾರಣಕರ್ತರಾಗಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು; ಮಂಡ್ಯ ಉಪ ವಿಭಾಗ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 24.08.2004ರ ಆದೇಶದಲ್ಲಿ ಅರ್ಜಿದಾರರಿಗೆ ಎರಡೂ ನೂರು ರೂಪಾಯಿಗಳ ದಂಡ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 18.01.2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆಯು ಸಮಂಜಸವಾಗಿದೆ. ಆದ್ದರಿಂದ ಈ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 55 ಪೊಸಿಅ 2006, ಬೆಂಗಳೂರು, ದಿನಾಂಕ:25ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿದ್ದೇಗೌಡ, ಸಿಪಿಸಿ-17 ಶ್ರೀರಂಗಪಟ್ಟಣ, ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 23.09.2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್.544

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಪಿ.ಎಸ್. ಸುದರ್ಶನ್, ಪಿಎಸ್‌ಐ., ಬಾಗೇಪಲ್ಲಿ ಪೊಲೀಸ್ ಠಾಣೆ, ಕೋಲಾರ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :** (1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಪನ್ನಿ/ ಡಿಇ-11/ 99-2000, ಓಬಿ ಸಂಖ್ಯೆ: 99/ 99-2000, ದಿನಾಂಕ: 21.12.1999.

(2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು:1:6:2000-2001, ದಿನಾಂಕ: 29.07.2001/ 01.08.2001.

(3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10.12.2004.

(4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು/ 2/ 15/ 2005, ದಿನಾಂಕ: 14.11.2005.

**ಪ್ರಸ್ತಾವನೆ:**

ಶ್ರೀ ಪಿ.ಎಸ್. ಸುದರ್ಶನ್, ಪಿಎಸ್‌ಐ, ಬಾಗೇಪಲ್ಲಿ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

"ಅರಣ್ಯ ಕಾಯಿದೆ ತಕ್ಸೀರಿನಲ್ಲಿ ಶಾಮೀಲಾಗಿ, ಅಧಿಕಾರವನ್ನು ದುರುಪಯೋಗಪಡಿಸಿ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಅಧಿಕಾರ ದುರುಪಯೋಗಪಡಿಸಿ, ದುರ್ನಡತೆ ಎಸಗಿರುವ ಬಗ್ಗೆ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:21.12.1999ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಎರಡು ವರ್ಷಗಳ ಅವಧಿಗೆ ತಡೆ ಹಿಡಿಯಲಾಗಿದೆ ಎಂಬ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದೂ ಆದರೂ ಅರ್ಜಿದಾರರ ಮೇಲೆ ದಾಕ್ಷಿಣ್ಯ ತೋರಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:29.07.2001/ 01.08.2001ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅರಣ್ಯ ಇಲಾಖೆ ಕಾಯಿದೆ ತಕ್ಸೀರಿನಲ್ಲಿ ಶಾಮೀಲಾಗಿ ಅಧಿಕಾರ ದುರುಪಯೋಗ ಪಡಿಸಿಕೊಂಡಿರುವುದು ದಾಖಲೆಗಳಿಂದ ಹಾಗೂ ಸಾಕ್ಷಿಗಳಿಂದ ದೃಢಪಟ್ಟಿದ್ದು, ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನಾದೇಶವನ್ನು ಮೇಲ್ಮನವಿ ಪ್ರಾಧಿಕಾರಿ ಕಡಿಮೆಗೊಳಿಸಿರುತ್ತಾರೆ ಆದ್ದರಿಂದ ಮೇಲ್ಮನವಿ ಪ್ರಾಧಿಕಾರಿ ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 19 ಪೊಸಿಅ 2005, ಬೆಂಗಳೂರು, ದಿನಾಂಕ:25ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಎಸ್. ಸುದರ್ಶನ್, ಪಿಎಸ್‌ಐ ಬಾಗೇಪಲ್ಲಿ, ಪೊಲೀಸ್ ಠಾಣೆ, ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 10.12.2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.545

**ವಿಷಯ:** ಶ್ರೀ ರಶೀದ ಹುಂಡೇಕಾರ್ ಮಾಜಿ ಸಿಪಿಸಿ-1404, ಬಿಜಾಪುರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ.

**ಓದಲಾಗಿದೆ :** (1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪುರ, ಇವರ ಆದೇಶ ಸಂಖ್ಯೆ: ಇಎಸ್‌ಟಿ-3/ ಪಿಆರ್-313/ 1988/ ಓಬಿ ಸಂಖ್ಯೆ: 79/ 88, ದಿನಾಂಕ:09.05.1988.

(2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/ 19/88, ದಿನಾಂಕ: 30.09.1998.

(3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24.05.2005.

(4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು/ 2/ 75/ 2004, ದಿನಾಂಕ:03.11.2005.

**ಪ್ರಸ್ತಾವನೆ:**

ಶ್ರೀ ಆರ್.ವೈ. ಹುಂಡೇಕಾರ್, ಸಿಪಿಸಿ-1404, ಆಲಮೇಲ ಪೊಲೀಸ್ ಠಾಣೆ ಬಿಜಾಪುರ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"ಆಪಾದಿತ ಪಿಸಿ-1404 ಆರ್.ವೈ. ಹುಂಡೇಕಾರ್, ಆಲಮೇಲ ಪೊಲೀಸ್ ಠಾಣೆ, ದಿನಾಂಕ: 19.12.87ರಂದು ಮಧ್ಯಾಹ್ನ 2.30 ಗಂಟೆಯ ಸುಮಾರಕ್ಕೆ ಸೆರೆ ಕುಡಿದು ಬಂದು, ಪಿಎಸ್‌ಐ ಹಾಗೂ ಪೊಲೀಸರಿಗೆ ಅವಾಚ್ಯ ಶಬ್ದಗಳಿಂದ ಬೈದು, ಅವರ ಜೊತೆಗೆ ಅನುಚಿತವಾಗಿ ವರ್ತಿಸಿದ್ದು ಆಗಿದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪುರ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 09.05.1988ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾಂ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:30.09.1988ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ದಿನಾಂಕ: 09.05.1988ರ ಶಿಸ್ತು ಪ್ರಾಧಿಕಾರಿ ಆದೇಶದ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಂಖ್ಯೆ: 5340/ 86ರಲ್ಲಿ ಸಲ್ಲಿಸಿದ್ದು, ಕೆ.ಎ.ಟಿ.ಯು ದಿನಾಂಕ: 17.08.1989ರಲ್ಲಿ ಸದರಿ ಅರ್ಜಿಯನ್ನು ಯಥಾವತ್ತಾಗಿ ವಜಾಗೊಳಿಸಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ಅನುಚಿತವಾಗಿ ವರ್ತಿಸಿರುವುದಕ್ಕೆ ಶಿಸ್ತು ಪ್ರಾಧಿಕಾರಿ ದಂಡನೆ ವಿಧಿಸಿರುವುದು ಸಮಂಜಸವಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 211 ಪೊಸಿಅ 2005, ಬೆಂಗಳೂರು, ದಿನಾಂಕ:25ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಶೀದ್ ಇಸ್ಮಾಯಿಲ್ ಹುಂಡೇಕಾರ್ ಮಾಜಿ ಪಿಸಿ-1404, ಬಿಜಾಪುರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 24.05.2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್.546

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ. ನಾಗೇಂದ್ರ, ಮಾಜಿ ಪಿಸಿ-8069, ಹೆಚ್‌ಎಎಲ್ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :** (1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ: 12/ ಡಿಇ/ ಆರ್-6/ ಪೂ/ 02 ದಿನಾಂಕ:28.05.2004.

(2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:20/ ಅಪೀಲು/ 2004, ದಿನಾಂಕ: 13.01.2005.

(3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23.02.2005.

(4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು/ 2/ 43/ 2005, ದಿನಾಂಕ:19.07.2005.

(5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ/ 156/ ಸಿಎನ್‌ಎಸ್/ 2005, ದಿನಾಂಕ: 28.02.2006.

**ಪ್ರಸ್ತಾವನೆ:**

ಶ್ರೀ ಎಂ. ನಾಗೇಂದ್ರ ಮಾಜಿ ಪಿಸಿ-8069, ಹೆಚ್‌ಎಎಲ್ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

1) "ಪಿಸಿ-8069, ಎಂ. ನಾಗೇಂದ್ರ, ಆದ ನಿಮ್ಮನ್ನು ಈ ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ-1/48/ ಪೊ/ 2002-03, ದಿನಾಂಕ: 08.11.2002 ಮತ್ತು ಪೊಲೀಸ್ ಕಮೀಷನರ್ ಕಛೇರಿ ಜ್ಞಾಪನಾ ಸಂಖ್ಯೆ: ಸಿಬ್ಬಂದಿ-1/118/ 2002, ದಿನಾಂಕ: 16.11.2002 ಪ್ರಕಾರ ವಿಧಾನ ಸೌಧ, ಭದ್ರತಾ ವಿಭಾಗಕ್ಕೆ OOD ಆಧಾರದ ಮೇಲೆ ನೇಮಕ ಮಾಡಿ, ದಿನಾಂಕ: 16.11.2002ರಂದು ರಹದಾರಿಯನ್ನು ಸಹಾ ನೀಡಿ, ಠಾಣೆಯಿಂದ ರಿಲೀವ್ ಮಾಡಿ ಕಳುಹಿಸಿದ್ದು, ನೀವು ದಿನಾಂಕ: 17.11.2002ರಂದು ಒಂದು ದಿನ ಅಲ್ಲಿ ಕೆಲಸ ಮಾಡಿ ದಿನಾಂಕ: 18.11.2002 ರಿಂದ ಯಾವುದೇ ಮುನ್ಸೂಚನೆ ನೀಡದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ನೀವು ಮೇಲಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ, ಅಶಿಸ್ತು ಮತ್ತು ದುರ್ನಡತೆ ಪ್ರದಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಪೂರ್ವ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 28.05.2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ ಬೆಂಗಳೂರುನಗರ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:13.01.2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಹಾಗೂ ಸೇವಾ ಪುಸ್ತಕವನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಾವು ಗೈರು ಹಾಜರಿ ಆಗಿರುವುದಕ್ಕೆ ದಾಖಲೆಗಳನ್ನು ಒದಗಿಸಿರುವುದನ್ನು, ಅವರ ತಂದೆ ಯವರು ಆಸ್ಪತ್ರೆಯಲ್ಲಿದ್ದಾಗ, ಅರ್ಜಿದಾರರು ಅವರನ್ನು ನೋಡಿಕೊಳ್ಳುತ್ತಿದ್ದ ಕಾರಣ ಕೇವಲ 42 ದಿನಗಳ ಗೈರುಹಾಜರಿಗೆ ಸೇವೆಯಿಂದ ವಜಾ ಮಾಡಿರುವ ದಂಡನೆ ಬಹಳ ಹೆಚ್ಚಿನದೆಂದು ಪರಿಗಣಿಸಿ, ಈ ಆದೇಶವನ್ನು

ರದ್ದುಪಡಿಸಿ, ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ನೇಮಕಗೊಳಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 28.02.2006ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ಸಹಮತಿ ನೀಡಿದೆ, ಅದರಂತೆ ಸರ್ಕಾರವು ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 218 ಪೊಸಿಅ 2005, ಬೆಂಗಳೂರು, ದಿನಾಂಕ:23ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ: 28.05.2004ರ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ರದ್ದುಪಡಿಸಿ, ಶ್ರೀ ಎಂ. ನಾಗೇಂದ್ರ, ಮಾಜಿ ಪಿಸಿ-8069 ಹೆಚ್‌ಎಎಲ್ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 23.02.2005 ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಕೆಳಕಂಡಂತೆ ಆದೇಶಿಸಿದೆ.

1. ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡತಕ್ಕದ್ದು;
2. ದಿನಾಂಕ:18.11.2002 ರಿಂದ 30.12.2002 ರವರೆಗಿನ ಅನಧಿಕೃತ ಗೈರುಹಾಜರಿಯನ್ನು ಅವರ ಹಕ್ಕಿನಲ್ಲಿರುವ ರಜೆ ಎಂದು ಪರಿಗಣಿಸಿ, ಮಂಜೂರು ಮಾಡತಕ್ಕದ್ದು.
3. ದಿನಾಂಕ: 31.12.2002 ರಿಂದ 19.10.2003 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸತಕ್ಕದ್ದು;
4. ಅರ್ಜಿದಾರರು ಸೇವೆಯಿಂದ ವಜಾಗೊಂಡ ದಿನಾಂಕದಿಂದ ಪುನಃ ಕರ್ತವ್ಯಕ್ಕೆ ಹಾಜರಾಗುವ ದಿನಾಂಕದ ವರೆಗಿನ ಅವಧಿಯನ್ನು ಕರ್ತವ್ಯದಿಂದ ಹೊರಗುಳಿದ ಅವಧಿಯೆಂದೇ ಪರಿಗಣಿಸತಕ್ಕದ್ದು;
5. ಅರ್ಜಿದಾರರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರದಂತೆ ತಡೆ ಹಿಡಿಯತಕ್ಕದ್ದು;
6. ಈ ಆದೇಶವು ಶಿಸ್ತು ಪ್ರಾಧಿಕಾರಿಯ ದಂಡನಾದೇಶ ಹೊರಡಿಸಿದ ದಿನಾಂಕ: 28.05.2004 ರಿಂದಲೇ ಜಾರಿಗೆ ಬರತಕ್ಕದ್ದು;

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ: 28.02.2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್.547

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಕೆ. ಶಿವಲಿಂಗಯ್ಯ, ಹಿಂದಿನ ತಹಶೀಲ್ದಾರ್, (ಈಗ ನಿವೃತ್ತರು) ಯಳಂದೂರು ತಾಲ್ಲೂಕು ಹಾಗೂ ಇತರೆ ಅಧಿಕಾರಿ ನೌಕರರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆ-ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 37 ಎಡಿಇ 93 ದಿನಾಂಕ: 24.04.2003.

(2) ಶ್ರೀ ಆರ್.ಎಲ್. ಅಗ್ನಿಹೋತ್ರಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ: 19.01.2005.

(3) ಶ್ರೀ ಕೆ. ಶಿವಲಿಂಗಯ್ಯ ಮತ್ತಿತರರಿಗೆ ನೀಡಿರುವ ಎರಡನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ:37:ಎಡಿಇ:93 ದಿನಾಂಕ:31.03.2005.

(4) ಶ್ರೀ ಕೆ. ಶಿವಲಿಂಗಯ್ಯ ಮತ್ತಿತರರು ನೀಡಿರುವ ಲಿಖಿತ ಸಮಜಾಯಿಷಿಗಳು ದಿನಾಂಕ: 17.06.2005, 13.04.2005, 15.04.2005, 16.07.2005, 16.04.2005, 07.04.2005.

(5) ಕರ್ನಾಟಕ ಲೋಕ ಸೇವಾ ಆಯೋಗ ಪತ್ರ ಸಂಖ್ಯೆ: ಪಿಎಸ್‌ಸಿ:161: ಸಿಎನ್‌ಎಸ್: 05, ದಿನಾಂಕ:30.01.2006.

**ಪ್ರಸ್ತಾವನೆ:**

ಹಿಂದಿನ ಮೈಸೂರು ಜಿಲ್ಲೆ, ಯಳಂದೂರು ತಾಲ್ಲೂಕಿನಲ್ಲಿ (ಈಗ ಚಾಮರಾಜನಗರ ಜಿಲ್ಲೆ) ಕೆಲವು ಅಕ್ರಮ ಗಣಿಗಾರಿಕೆಯನ್ನು ತಡೆಗಟ್ಟುವಲ್ಲಿ ವಿಫಲರಾದ ಕಾರಣಕ್ಕಾಗಿ ಈ ಕೆಳಕಂಡ ಅಧಿಕಾರಿ/ ನೌಕರರಾದ

1. ಶ್ರೀ ಕೆ. ಶಿವಲಿಂಗಯ್ಯ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು), ಯಳಂದೂರು ತಾಲ್ಲೂಕು.
2. ಶ್ರೀ ನಂಜಯ್ಯ, ಹಿಂದಿನ ಉಪ ತಹಶೀಲ್ದಾರ್ (ಈಗ ನಿವೃತ್ತರು) ನಾಡ ಕಛೇರಿ, ಅಗರ ಯಳಂದೂರು ತಾಲ್ಲೂಕು.
3. ಶ್ರೀ ಪಿ. ಮಲ್ಲಣ್ಣ, ಹಿಂದಿನ ರಾಜಸ್ವ ನಿರೀಕ್ಷಕರು (ಈಗ ನಿವೃತ್ತರು) ಅಗರ ಹೋಬಳಿ, ಯಳಂದೂರು ತಾಲ್ಲೂಕು.
4. ಶ್ರೀ ಎಸ್. ರಾಮಸ್ವಾಮಿ, ಹಿಂದಿನ ಗ್ರಾಮ ಲೆಕ್ಕಿಗ (ಈಗ ನಿವೃತ್ತರು) ಗೌಡಹಳ್ಳಿ ವೃತ್ತ, ಯಳಂದೂರು ತಾಲ್ಲೂಕು.
5. ಶ್ರೀ ಎಸ್. ರಾಮಸ್ವಾಮಿ ಐಯ್ಯಂಗಾರ್, ರಾಜಸ್ವ ನಿರೀಕ್ಷಕರು (ಈಗ ನಿವೃತ್ತರು), ಕಸಬಾ ಹೋಬಳಿ, ಯಳಂದೂರು ತಾಲ್ಲೂಕು.
6. ಶ್ರೀ ಕೆ.ಎಸ್. ವೆಂಕಟೇಶಾಚಾರ್, ಹಿಂದಿನ ಗ್ರಾಮ ಲೆಕ್ಕಿಗ (ಈಗ ನಿವೃತ್ತರು), ದುಗ್ಗಟ್ಟಿ ವೃತ್ತ ಯಳಂದೂರು ತಾಲ್ಲೂಕು.

ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ದಿನಾಂಕ: 24.04.2003ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾದ ಶ್ರೀ ಆರ್.ಎಲ್. ಅಗ್ನಿಹೋತ್ರಿ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಈ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ದಿನಾಂಕ: 19.01.2005ರಲ್ಲಿ ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಈ ವಿಚಾರಣಾ ವರದಿಯಲ್ಲಿ ಮೊದಲನೇ ಆರೋಪಿಯಾದ ಶ್ರೀ ಕೆ. ಶಿವಲಿಂಗಯ್ಯ ಇವರ ವಿರುದ್ಧ 4 ಆರೋಪಗಳನ್ನು ಮಾಡಲಾಗಿದ್ದು, ಇವುಗಳಲ್ಲಿ 1 ಮತ್ತು 2ನೇ ಆರೋಪಗಳು ಸಾಬೀತಾಗಿವೆಯೆಂದು ಮತ್ತು ಉಳಿದ 5 ಮಂದಿ ಆರೋಪಿತರುಗಳ ವಿರುದ್ಧ ತಲಾ 3 ಆರೋಪಗಳು ಇದ್ದು 1 ಮತ್ತು 2ನೇ ಆರೋಪಗಳು ಸಾಬೀತಾಗಿವೆಯೆಂದು ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಶ್ರೀ ಕೆ. ಶಿವಲಿಂಗಯ್ಯ ಮತ್ತು ಇತರ 5 ಮಂದಿ ಆರೋಪಿತರುಗಳ ವಿರುದ್ಧ ಮಾಡಲಾದ ಆರೋಪಗಳಲ್ಲಿ 2 ಆರೋಪಗಳು ಸಾಬೀತಾಗಿದೆ ಎಂದು ವಿಚಾರಣಾ ವರದಿಯಲ್ಲಿ ಕಂಡುಬಂದ ಕಾರಣ ಹಾಗೂ ಇವರುಗಳಲ್ಲಿ ಶ್ರೀ ಎಸ್. ರಾಮಸ್ವಾಮಿ, ಇವರೊಬ್ಬರನ್ನು ಹೊರತುಪಡಿಸಿ ಉಳಿದವರೆಲ್ಲಾ ಈಗಾಗಲೇ ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುವುದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳನ್ವಯ ಇವರುಗಳಿಗೆ ದಂಡನೆ ವಿಧಿಸಲು ಅವಕಾಶವಿಲ್ಲದ ಕಾರಣ, ಇವರುಗಳಿಗೆ ಕರ್ನಾಟಕ ನಾಗರೀಕ

ಸೇವಾ ನಿಯಮಾವಳಿಯ ನಿಯಮ 214ರಡಿಯಲ್ಲಿ ಹಾಗೂ ಶ್ರೀ ಎಸ್. ರಾಮಸ್ವಾಮಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ 1957ರ ನಿಯಮ 8ರಲ್ಲಿನ ಯಾವುದಾದರೂ ಒಂದು ದಂಡನೆಯನ್ನು ವಿಧಿಸಲು ಉದ್ದೇಶಿಸಿರುವ ಬಗ್ಗೆ ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ದಿನಾಂಕ: 31.03.2005ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ನೀಡಲಾಗಿತ್ತು. ಆಪಾದಿತ ಅಧಿಕಾರಿ/ ನೌಕರರು ಮೇಲೆ ಕ್ರ.ಸಂ.(4)ರಲ್ಲಿ ಓದಲಾದ ಪತ್ರಗಳಲ್ಲಿ ಲಿಖಿತ ಸಮಜಾಯಿಷಿಯನ್ನು ನೀಡಿರುತ್ತಾರೆ. ಇವರುಗಳು ತಮ್ಮ ಲಿಖಿತ ಸಮಜಾಯಿಷಿಯಲ್ಲಿ ತಮಗೆ ದಂಡನೆ ವಿಧಿಸುವ ಕ್ರಮವನ್ನು ಕೈಬಿಡುವಂತೆ ಸರ್ಕಾರವನ್ನು ಕೋರಿದ್ದಾರೆ.

ಈ ಪ್ರಕರಣದಲ್ಲಿ ಶ್ರೀ ಎಸ್. ರಾಮಸ್ವಾಮಿ, ಗ್ರಾಮ ಲೆಕ್ಕಿಗ ಇವರು ಮಾತ್ರ ಎರಡನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡುವಾಗ ಸೇವೆಯಲ್ಲಿದ್ದು ಇವರೂ ಸಹ ದಿನಾಂಕ: 31.08.2005ರಂದು ನಿವೃತ್ತಿ ಹೊಂದಿರುತ್ತಾರೆ.

ಈ ಹಿನ್ನೆಲೆಯಲ್ಲಿ ಶ್ರೀ ಕೆ. ಶಿವಲಿಂಗಯ್ಯ ಮತ್ತು ಇತರೆ 5 ಮಂದಿಯೂ ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುವುದರಿಂದ ಇವರುಗಳಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಲು ಸರ್ಕಾರ ನಿರ್ಧರಿಸಿರುತ್ತದೆ.

1. ಮೊದಲನೇ ಆರೋಪಿಯಾದ ಶ್ರೀ ಕೆ. ಶಿವಲಿಂಗಯ್ಯ ನಿವೃತ್ತ ತಹಶೀಲ್ದಾರ್ (ಗ್ರೂಫ್-ಬಿ ವೃಂದ) ಇವರಿಗೆ ಕೆಸಿಎಸ್‌ಆರ್ ನಿಯಮ 214ರಡಿಯಲ್ಲಿ ಮಾಹೆಯಾನ ರೂ.500/- ರಂತೆ 2 ವರ್ಷಗಳ ಅವಧಿಗೆ ಪಿಂಚಣಿಯಲ್ಲಿ ಕಡಿತಗೊಳಿಸುವುದು.
2. 2, 3, 4, 5 ಮತ್ತು 6ನೇ ಆರೋಪಿಗಳಾದ ಶ್ರೀ ನಂಜಯ್ಯ ಹಿಂದಿನ ಉಪ ತಹಶೀಲ್ದಾರ್ ಶ್ರೀ ಪಿ. ಮಲ್ಲಣ್ಣ ಹಿಂದಿನ ರಾಜಸ್ವ ನಿರೀಕ್ಷಕ, ಶ್ರೀ ಎಸ್. ರಾಮಸ್ವಾಮಿ, ಹಿಂದಿನ ಗ್ರಾಮ ಲೆಕ್ಕಿಗ ಶ್ರೀ ಎಸ್. ರಾಮಸ್ವಾಮಿ ಐಯ್ಯಂಗಾರ್ ಹಿಂದಿನ ರಾಜಸ್ವ ನಿರೀಕ್ಷಕ ಮತ್ತು ಶ್ರೀ ಕೆ.ಎಸ್. ವೆಂಕಟೇಶಾಚಾರ್ ಹಿಂದಿನ ಗ್ರಾಮಲೆಕ್ಕಿಗ (ಗ್ರೂಪ್-ಸಿ ವೃಂದ) ಇವರುಗಳಿಗೆ ಕೆ.ಸಿ.ಎಸ್.ಆರ್. ನಿಯಮ 214ರಡಿಯಲ್ಲಿ ಮಾಹೆಯಾನ ರೂ.300/- ರಂತೆ 2 ವರ್ಷಗಳ ಅವಧಿಗೆ ಪಿಂಚಣಿಯಲ್ಲಿ ಕಡಿತಗೊಳಿಸುವುದು.

ಮೇಲೆ ಕ್ರ.ಸಂ.(5)ರಲ್ಲಿ ಓದಲಾದ ಪತ್ರದಲ್ಲಿ ಮೇಲ್ಕಂಡ ದಂಡನೆಯನ್ನು ವಿಧಿಸಲು ಕರ್ನಾಟಕ ಲೋಕಸೇವಾ ಆಯೋಗವು ಸಹಮತಿಯನ್ನು ನೀಡಿರುತ್ತದೆ.

ಮೇಲ್ಕಂಡ ಸಂದರ್ಭಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 37 ಎಡಿಇ 93, ಬೆಂಗಳೂರು, ದಿನಾಂಕ:23ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಪ್ರಕರಣದ ಮೊದಲನೇ ಆರೋಪಿಯಾದ ಶ್ರೀ ಕೆ. ಶಿವಲಿಂಗಯ್ಯ ನಿವೃತ್ತ ತಹಶೀಲ್ದಾರ್ ಇವರಿಗೆ ಕೆ.ಸಿ.ಎಸ್.ಆರ್. ನಿಯಮ 214 ರಡಿಯಲ್ಲಿ ಮಾಹೆಯಾನ ರೂ.500/- ರಂತೆ 2 ವರ್ಷಗಳ ಅವಧಿಗೆ ಪಿಂಚಣಿಯಲ್ಲಿ ಕಡಿತಗೊಳಿಸಲು ಹಾಗೂ 2, 3, 4, 5 ಮತ್ತು 6ನೇ ಆರೋಪಿಗಳಾದ ಅನುಕ್ರಮವಾಗಿ ಶ್ರೀ ನಂಜಯ್ಯ, ಶ್ರೀ ಪಿ. ಮಲ್ಲಣ್ಣ, ಶ್ರೀ ಎಸ್.ರಾಮಸ್ವಾಮಿ, ಶ್ರೀ ಎಸ್. ರಾಮಸ್ವಾಮಿ ಐಯ್ಯಂಗಾರ್ ಮತ್ತು ಶ್ರೀ ಕೆ.ಎಸ್. ವೆಂಕಟೇಶಾಚಾರ್ ಇವರುಗಳಿಗೆ ಕೆ.ಸಿ.ಎಸ್.ಆರ್. ನಿಯಮ 214ರಡಿಯಲ್ಲಿ ಮಾಹೆಯಾನ ರೂ.300/- ರಂತೆ 2 ವರ್ಷಗಳ ಅವಧಿಗೆ ಪಿಂಚಣಿಯಲ್ಲಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಪೊಲೀಸ್ ಸೇವೆಗಳು-3)

ಪಿ.ಆರ್.552

## ಕಾನೂನು,ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ ಭದ್ರಾವತಿ ಕಂದಾಯ ತಾಲ್ಲೂಕಿಗೆ ನೋಟರಿ ನೇಮಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ: ಲಾ 8 ಎಲ್‌ಸಿಎಲ್ 05 ದಿನಾಂಕ:13.07.2005.
(2) ಸರ್ಕಾರಿ ಸಮಸಂಖ್ಯೆ ಪತ್ರ: ದಿನಾಂಕ: 11.08.2005.
(3) ಪತ್ರ ಸಂಖ್ಯೆ: ADM. DJS/1520/ 2005 ದಿನಾಂಕ: 03.12.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:13.07.2005ರ ಆದೇಶದಲ್ಲಿ ಭದ್ರಾವತಿ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿತ್ತು. ಸದರಿ ಹುದ್ದೆ ತುಂಬಲು ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 11.08.2005ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಶಿವಮೊಗ್ಗ ಇವರನ್ನು ಕೋರಲಾಗಿತ್ತು. ಆ ಮೇರೆಗೆ (3)ರಲ್ಲಿ ಓದಲಾದ ದಿನಾಂಕ: 03.12.2005ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಶಿವಮೊಗ್ಗ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಅದನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 08 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ:27ನೇ ಮಾರ್ಚ್, 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ಶ್ರೀ ಹೆಚ್.ಆರ್. ಲೋಕೇಶ್ವರ ರಾವ್, ವಕೀಲರು ಬಿನ್ ರುದ್ರೋಜಿ ರಾವ್, ಹನುಮಂತಪುರ ವಿಲೇಜ್, ಹೊಳೆಹೊನ್ನೂರಹೋಬಳಿ, ಭದ್ರಾವತಿ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಭದ್ರಾವತಿ ಕಂದಾಯ ತಾಲ್ಲೂಕಿಗೆ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01- ನ್ಯಾಯ ಪರಿಪಾಲನೆ-501-0- ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳು (0070-01-501-0-06) ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಿದ ರೂ.1000/- (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ 1952ರ ಕಲಂ 4ರ ಪ್ರಕಾರ ಸರ್ಕಾರ ನಿರ್ವಹಿಸುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್.553

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶದಲ್ಲಿನ ಬೊಮ್ಮನಹಳ್ಳಿ ನಗರಸಭೆ ವ್ಯಾಪ್ತಿಯಲ್ಲಿ ಬರುವ ಕೋಣನಕುಂಟೆ ಮತ್ತು ಕೊತ್ತನೂರು ದಿಣ್ಣೆ ಇವುಗಳಿಗೆ ಸಂಚಿತ ಹಣಕಾಸು ಚೌಕಟ್ಟಿನೊಳಗೆ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯನ್ನು ಅನುಷ್ಠಾನ-ಬಳಕೆದಾರರ ಬಂಡವಾಳ ವಂತಿಕೆಯನ್ನು ಸಂಗ್ರಹಿಸುವ ದಿನಾಂಕವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ನಅಇ 27 ಎಂಎನ್‌ಐ 2000, ದಿನಾಂಕ: 26.12.2003.

(2) ಸರ್ಕಾರದ ಆದೇಶ ಸಂಖ್ಯೆ: ನಅಇ 36 ಎಂಎನ್‌ಐ 2004, ದಿನಾಂಕ: 13.02.2004.

(3) ಸರ್ಕಾರದ ಆದೇಶ ಸಂಖ್ಯೆ: ನಅಇ 36 ಎಂಎನ್‌ಐ 2004, ದಿನಾಂಕ: 26.03.2004.

(4) ಸರ್ಕಾರದ ಆದೇಶ ಸಂಖ್ಯೆ: ನಅಇ 145 ಎಂಎನ್‌ಐ 2004, ದಿನಾಂಕ: 28.02.2005 ಮತ್ತು 09.03.2005.

(5) ಆರ್ಥಿಕ ವ್ಯವಸ್ಥಾಪಕರು, ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕೆಯುಐಡಿಎಫ್‌ಸಿ/ ಜಿಬಿಡಬ್ಲ್ಯೂಎಸ್‌ಪಿ/ ಎಂಎಫ್/ 3432/ 2005-06, ದಿನಾಂಕ: 08.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 26.12.2003ರ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರಂ, ರಾಜರಾಜೇಶ್ವರಿನಗರ ಮತ್ತು ಯಲಹಂಕ 7 ನಗರಸಭೆಗಳು ಮತ್ತು 1 ಕೆಂಗೇರಿ ಪುರಸಭೆಗೆ ರೂ.658.64 ಕೋಟಿ ಒಟ್ಟು ಅಂದಾಜು ವೆಚ್ಚದಲ್ಲಿ ನೀರು ಪೂರೈಕೆ ಹಾಗೂ ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ. ಸದರಿ ಆದೇಶದಲ್ಲಿ ನಮೂದಿಸಿರುವಂತೆ ಯೋಜನೆಯಲ್ಲಿ ಪಾಲ್ಗೊಳ್ಳುವ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ಗೃಹ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.8,500/- ಮತ್ತು ಗೃಹೇತರ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.17,000/- ರಂತೆ ಒಂದು ಬಾರಿ ಬಂಡವಾಳ ವಂತಿಗೆಯನ್ನು ಸಂಗ್ರಹಿಸಲು ಸೂಚಿಸಲಾಗಿದೆ. ಈ ವಂತಿಗೆಯ ಮೊತ್ತವು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯು ವಿಧಿಸುವ ಮಾರ್ಗ ಮತ್ತು ಸಂಪರ್ಕ ವೆಚ್ಚ ಹಾಗೂ ಸ್ವತ್ತಿನ ಮಾಲೀಕರು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂದಾಯ ಮಾಡಬೇಕಾದ ರಸ್ತೆ ಅಗಿಯುವ ವೆಚ್ಚಗಳು ಸೇರಿರುವುದಿಲ್ಲ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 13.02.2004ರ ಆದೇಶದಲ್ಲಿ ಫಲಾನುಭವಿಗಳು ಬಂಡವಾಳ ವಂತಿಗೆಯ (ಬಿಸಿಸಿ) ವಿನ್ಯಾಸವನ್ನು (structure) ಸರ್ಕಾರವು ನಿರ್ದಿಷ್ಟವಾಗಿ ತಿಳಿಸಿದೆ. 40'x60'ರ ವಿನ್ಯಾಸದ ನಿವೇಶನಗಳಿಗೆ ಮತ್ತು 1200 ಚದರಡಿ ವರೆಗಿನ ವಸತಿ ಸಮುಚ್ಚಾಲಯಗಳಿಗೆ ರೂ.10,000/- ಮತ್ತು 40'x60' ಅಳತೆ ಮೀರಿದ ನಿವೇಶನಗಳಿಗೆ ಹಾಗೂ 1200 ಚದರಡಿ ಮೀರಿದ ವಸತಿ ಸಮುಚ್ಚಾಲಯಗಳಿಗೆ ರೂ.15,000/- ಫಲಾನುಭವಿ ಬಂಡವಾಳ ವಂತಿಗೆಯ ಸಂಗ್ರಹಣೆಯನ್ನು ನಿಗದಿಪಡಿಸಿದೆ. ಗೃಹೇತರ ಸ್ವತ್ತುಗಳು/ ವಾಣಿಜ್ಯ ಸ್ವತ್ತುಗಳಿಗೆ ಸಂಬಂಧಿಸಿದಂತೆ ವಂತಿಗೆಯನ್ನು ರೂ.20,000/- ನಿಗದಿಪಡಿಸಿ ಸದರಿ ವಂತಿಗೆ ಸಂಗ್ರಹಣೆಗೆ ಕಡೇ ದಿನಾಂಕವನ್ನು 31.07.2004 ಎಂದು ಪ್ರಕಟಿಸಲಾಗಿತ್ತು. ಇದಾದ ನಂತರ ಹೆಚ್ಚುವರಿ 5000/- ಮೊತ್ತವನ್ನು ಪಾವತಿ ಮಾಡಬೇಕೆಂದು ಆದೇಶಿಸಿತ್ತು.

ಮೇಲೆ (4)ರಲ್ಲಿ ಓದಲಾದ ದಿನಾಂಕ: 28.02.2005 ಮತ್ತು 09.03.2005ರ ಆದೇಶಗಳಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರಂ, ರಾಜರಾಜೇಶ್ವರಿನಗರ ಮತ್ತು ಯಲಹಂಕ 7 ನಗರಸಭೆಗಳು ಮತ್ತು 1 ಕೆಂಗೇರಿ ಪುರಸಭೆ ಪ್ರದೇಶಗಳಲ್ಲಿ ಬರುವ ವಿವಿಧ ಮಾದರಿಯ ಆಸ್ತಿಗಳಿಗೆ ಫಲಾನುಭವಿಗಳಿಂದ ಬಂಡವಾಳ ವಂತಿಕೆ (ಬಿ.ಸಿ.ಸಿ.) ಸಂಗ್ರಹಣೆ ಕುರಿತು ಪರಿಷ್ಕೃತ ವಿನ್ಯಾಸಕ್ಕೆ ಸರ್ಕಾರವು ಅನುಮೋದನೆ ನೀಡಿ, ಬಂಡವಾಳ ವಂತಿಗೆಯನ್ನು ಸಂಗ್ರಹಿಸುವ ದಿನಾಂಕವನ್ನು 31ನೇ ಜುಲೈ 2005ರೊಳಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ದಿನಾಂಕ: 08.02.2006ರ ಪತ್ರದಲ್ಲಿ ಆರ್ಥಿಕ ವ್ಯವಸ್ಥಾಪಕರು, ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು, ಇವರು ದಿನಾಂಕ: 18.01.2006ರಂದು ಸರ್ಕಾರದ ಪ್ರಧಾನಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಇತ್ತೀಚೆಗೆ ಬೊಮ್ಮನಹಳ್ಳಿ ನಗರಸಭೆ ವ್ಯಾಪ್ತಿಗೆ ಒಳಪಡಿಸಿರುವ ಕೋಣನಕುಂಟೆ ಮತ್ತು ಕೊತ್ತನೂರು ದಿಣ್ಣೆ ಗ್ರಾಮಗಳಿಗೆ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಇರುವ ಬಳಕೆದಾರರ ಸಂಗ್ರಹ ವಂತಿಕೆ ದಿನಾಂಕವನ್ನು ದಿನಾಂಕ: 30.09.2006ರವರೆಗೆ ವಿಸ್ತರಿಸಲು ನಿರ್ಧರಿಸಲಾಗಿದೆ. ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: 162 ಎಂಎನ್‌ಐ 2005, ಬೆಂಗಳೂರು, ದಿನಾಂಕ:22ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ: 145 ಎಂಎನ್‌ಐ 2004 ದಿನಾಂಕ: 28.02.2005ರಲ್ಲಿ ಸೂಚಿಸಿರುವ ವಿವಿಧ ಮಾದರಿಯ ನಿವೇಶನಗಳಿಗೆ, ಬೊಮ್ಮನಹಳ್ಳಿ ನಗರಸಭೆ ವ್ಯಾಪ್ತಿಗೆ ಇತ್ತೀಚೆಗಷ್ಟೇ ಒಳಪಡಿಸಿರುವ ಕೋಣನಕುಂಟೆ ಮತ್ತು ಕೊತ್ತನೂರು ದಿಣ್ಣೆ ಗ್ರಾಮಗಳ ಫಲಾನುಭವಿಗಳಿಗೆ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಇರುವ ಬಳಕೆದಾರರ ಸಂಗ್ರಹ ವಂತಿಕೆ ದಿನಾಂಕವನ್ನು ದಿನಾಂಕ: 30.09.2006ರವರೆಗೆ ವಿಸ್ತರಿಸಿ ಆದೇಶಿಸಿದೆ.

ಕನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವ್ಹಿ.ಆರ್. ಇಲಕಲ್**

ಪಿ.ಆರ್.554

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ವಿದ್ಯಾವಿಕಾಸ ಯೋಜನೆ 2006-07ನೇ ಸಾಲಿಗೆ ಗುಲ್ಬರ್ಗಾ ಜಿಲ್ಲೆಗೆ ಸಮವಸ್ತ್ರ ಬಟ್ಟೆಗಳನ್ನು ಸರಬರಾಜು ಮಾಡಿದ್ದಕ್ಕಾಗಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ಹಣಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ: ಆಇ 1745: ವೆಚ್ಚ-6, 2005, ದಿನಾಂಕ: 22.10.2005 ಮತ್ತು 28.10.2005.

(2) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಅ4(1) ಸಮವಸ್ತ್ರ/ ಕೆಹೆಚ್‌ಡಿಸಿ/ ಪಾವತಿ/ 58/ 2005-2006, ದಿನಾಂಕ: 24.03.2006.

**ಪ್ರಸ್ತಾವನೆ:**

ವಿದ್ಯಾವಿಕಾಸ ಯೋಜನೆಯಡಿ ಉಚಿತ ಸಮವಸ್ತ್ರ ಪೂರೈಕೆಗಾಗಿ ಮೇಲೆ (1) ಮತ್ತು (2)ರಲ್ಲಿ ಓದಲಾದ ದಿನಾಂಕ: 22.10.2005 ಹಾಗೂ 28.10.2005ರ ಸರ್ಕಾರಿ ಆದೇಶಗಳಲ್ಲಿ 2005-06ನೇ ಸಾಲಿಗೆ 2737.31 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿತ್ತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 24.03.2006ರ ತಮ್ಮ ಪತ್ರದಲ್ಲಿ ಈ ರೀತಿ ಬಿಡುಗಡೆ ಮಾಡಿದ ಹಣವನ್ನು ವೆಚ್ಚಮಾಡಿದ ಬಳಿಕ ರೂ.301 ಲಕ್ಷಗಳು ಉಳಿತಾಯ ಆಗಿದ್ದು 2006-07ನೇ ಸಾಲಿಗೆ ನೀಡಿದ ಸರಬರಾಜು ಆದೇಶವನ್ನನುಸರಿಸಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ಗುಲ್ಬರ್ಗಾ ಜಿಲ್ಲೆಗೆ ಅಗತ್ಯವಾದ ಸಮವಸ್ತ್ರ ಬಟ್ಟೆಗಳನ್ನು 18.03.2006ರಂದು ಪೂರೈಕೆ ಮಾಡಿದ್ದು ಇದರ ಮೌಲ್ಯ ರೂ.316.71 ಲಕ್ಷ ಆಗಿರುವುದರಿಂದ ಉಳಿತಾಯವಾಗಿರುವ ರೂ.301 ಲಕ್ಷಗಳನ್ನು ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ಪಾವತಿ ಮಾಡಲು ಸರ್ಕಾರದ ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಇಡಿ 376 ಯೋಯೋಕಾ 2005, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2006**
**(ಇಡಿ: 38: ಸ್ಕೀಮರ (ಯುನಿಕ್) 2006, ದಿನಾಂಕ: 29ನೇ ಮಾರ್ಚ್, 2006**

ವಿದ್ಯಾವಿಕಾಸ ಯೋಜನೆಯಡಿ 2005-06ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202-01-109-0-51 ಅಡಿ ಬಿಡುಗಡೆ ಮಾಡಲಾದ ರೂ.2737 ಲಕ್ಷಗಳಲ್ಲಿ ವೆಚ್ಚವಾಗಿ ಉಳಿದ ರು301 ಲಕ್ಷಗಳನ್ನು ಗುಲ್ಬರ್ಗಾ ಜಿಲ್ಲೆಗೆ 2006-07ನೇ ಸಾಲಿನ ಕಾರ್ಯಕ್ರಮಕ್ಕೆ ಅಗತ್ಯವಾದ ಬಟ್ಟೆಗಳನ್ನು ಸರಬರಾಜು ಮಾಡಿದ್ದಕ್ಕಾಗಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ಪಾವತಿ ಮಾಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ. ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2201-01-197-1-01 (ಯೋಜನೆ) ರಲ್ಲಿ ಭರಿಸತಕ್ಕದ್ದು.

ಗುಲ್ಬರ್ಗಾ ಜಿಲ್ಲೆಗೆ ಅಗತ್ಯವಾದ ಉಚಿತ ಸಮವಸ್ತ್ರ ಬಟ್ಟೆಗಳನ್ನು ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ಪೂರ್ಣವಾಗಿ ಸರಬರಾಜು ಮಾಡಿರುವುದನ್ನು ಖಚಿತ ಪಡಿಸಿಕೊಂಡ ನಂತರವೇ ಹಣವನ್ನು ಪಾವತಿ ಮಾಡತಕ್ಕದ್ದು. ಈ ಸಂಸ್ಥೆಗೆ ಯಾವುದೇ ಮುಂಗಡ ಹಣವನ್ನು ಪಾವತಿಸಬಾರದು. ಬಿಡುಗಡೆ ಮಾಡಿರುವ ಹಣಕ್ಕೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ಇವರು ಹಣಪಾವತಿ ರಸೀದಿ ತಯಾರಿಸಿ ಅದಕ್ಕೆ ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರಿಂದ ಮೇಲುರುಜು ಹೊಂದಿ ಹಣವನ್ನು ಪಡೆಯತಕ್ಕದ್ದು.

ನಿಗಮವು ಸರಬರಾಜು ಮಾಡುವ ಬಟ್ಟೆಗಳ ಗುಣಮಟ್ಟವನ್ನು ಕಾಯ್ದುಕೊಳ್ಳುವ ಬಗ್ಗೆ ನಿಗಾವಹಿಸತಕ್ಕದ್ದು ಮತ್ತು ಬಟ್ಟೆಗಳ ಸರಬರಾಜು ಕುರಿತಂತೆ ಮೌಲ್ಯಮಾಪನ ವರದಿಯಲ್ಲಿ ಕಂಡು ಬಂದಿರುವ ಲೋಪಗಳನ್ನು ಸರಿಪಡಿಸಲೂ ಅಗತ್ಯ ಕ್ರಮವನ್ನು ಕೂಡಲೇ ಕೈಗೊಳ್ಳುವುದು. ಸಮವಸ್ತ್ರ ಬಟ್ಟೆಗಳನ್ನು ಸಕಾಲದಲ್ಲಿ ಸರಬರಾಜಾಗುತ್ತಿರುವ ಬಗ್ಗೆ ಪ್ರಗತಿಯನ್ನು ಸಾರ್ವಜನಿಕ ಶಿಕ್ಷಣ ಆಯುಕ್ತರು ಪರಿಶೀಲಿಸತಕ್ಕದ್ದು.

ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ. ಸಂಖ್ಯೆ: ಇಡಿ 341 ಐಎಫ್(ಬಿಎ) 2006, ದಿನಾಂಕ: 28.03.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

ಪಿ.ಆರ್.561

## ಕಂದಾಯ ಸಚಿವಾಲಯ

**ವಿಷಯ:** ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯು ಬಸವನ ಬಾಗೇವಾಡಿ ದೇವಸ್ಥಾನದ ನಿವೇಶನದಲ್ಲಿ ಮಾರಾಟ ಮಳಿಗೆಗಳನ್ನು ನಿರ್ಮಿಸುವ ಸಲುವಾಗಿ ಬ್ಯಾಂಕಿನಿಂದ ಸಾಲ ಪಡೆಯಲು ಅನುಮತಿ ನೀಡುವ ಕುರಿತು.

**ಓದಲಾಗಿದೆ :** (1) ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ, ಕೂಡಲ ಸಂಗಮ ಇವರ ಪತ್ರ ಸಂಖ್ಯೆ: ಆಕೂಸಅಅಮಂ/ ಬ.ಬಾ/ 2005-06/ 443, ದಿನಾಂಕ: 27.02.2006.

**ಪ್ರಸ್ತಾವನೆ:**

ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯು ಆಯುಕ್ತರು ಮೇಲೆ ಓದಲಾದ ಪತ್ರದ ಮುಖಾಂತರ ಮಂಡಳಿಯು ಹಿಂದಿನ ಸಭೆಯಲ್ಲಿ ಅನುಮೋದಿಸಿದ್ದ 86 ಅಂಗಡಿಗಳನ್ನು ನಿರ್ಮಿಸಲಾಗುತ್ತಿದ್ದು ಅವುಗಳಿಗೆ ಭಾವಿ ಬಾಡಿಗೆದಾರರಿಂದ 109.65 ಲಕ್ಷ ರೂ.ಗಳನ್ನು ಈಗಾಗಲೇ ಸಂಗ್ರಹಿಸಿರುವುದಾಗಿಯೂ, ಇನ್ನೂ ರೂ.33.00 ಲಕ್ಷ ಕೊರತೆ ಬೀಳುತ್ತದೆ ಎಂದು ತಿಳಿಸಿದ್ದಾರೆ. ಈ ಹಣವನ್ನು ಬಿಜಾಪುರ ಡಿ.ಸಿ.ಸಿ. ಬ್ಯಾಂಕಿನಿಂದ 5 ವರ್ಷಗಳ ಅವಧಿಗೆ ಶೇ.9 ರ ಸರಳ ಬಡ್ಡಿಯಲ್ಲಿ ಸಾಲ ಪಡೆದುಕೊಂಡು ಪ್ರತಿ ತಿಂಗಳು ಅಂಗಡಿಗಳಿಂದ ಬರುವ ಬಾಡಿಗೆಯಲ್ಲಿ ಪ್ರತಿಶತ 50ರಷ್ಟು ಬಾಡಿಗೆಯನ್ನು ಸಾಲಕ್ಕೆ ಕಟ್ಟುವುದರಿಂದ 5 ವರ್ಷಗಳಲ್ಲಿ ಸದರಿ ರೂ.33.00 ಲಕ್ಷ ಸಾಲ ಹಾಗೂ ಅದರ ಮೇಲೆ ಕೊಡಬೇಕಾದ ರೂ.7,54,890.00 ಬಡ್ಡಿ ಸೇರಿ ಒಟ್ಟು ರೂ.40,54,890.00 ನ್ನು ಸಂಪೂರ್ಣವಾಗಿ ಬ್ಯಾಂಕಿಗೆ ಕಟ್ಟಬಹುದಾಗಿದೆ ಎಂದು ತಿಳಿಸಿದ್ದಾರೆ. ಸಾಲ ತೀರುವಳಿ ಆದ ನಂತರ ಇದರಿಂದ ಪ್ರತಿ ತಿಂಗಳು ಮಂಡಳಿಗೆ 1,39,898.00 ರೂಪಾಯಿಗಳ ನಿವ್ವಳ ಆದಾಯ ಸಂಗ್ರಹವಾಗುತ್ತದೆ. ಇದರಿಂದ ಮಂಡಳಿಯ ಅಭಿವೃದ್ಧಿಗೆ ಹಣಕಾಸಿನ ಸಹಾಯ ದೊರೆತಂತಾಗುತ್ತದೆ. ಈ ಸಾಲವನ್ನು ಪಡೆಯಲು ಸರ್ಕಾರದ ಗ್ಯಾರಂಟಿ ಬೇಕಾಗಿಲ್ಲ. ಸಾಲ ತೀರಿಸಲು ಸರ್ಕಾರದಿಂದ ಹಣ ಪಡೆದುಕೊಳ್ಳಬೇಕಾಗಿಲ್ಲ. ಹಾಗೂ ಇದರಿಂದ ಮಂಡಳಿಗೆ ಯಾವ ರೀತಿಯ ಹಾನಿ ಆಗುವುದಿಲ್ಲ, ಬದಲಾಗಿ ದೊಡ್ಡ ಪ್ರಮಾಣದಲ್ಲಿ ಪ್ರತಿ ತಿಂಗಳು ಲಾಭವಾಗುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ಸಾಲವನ್ನು ಪಡೆಯಲು ಸರ್ಕಾರದ ಪೂರ್ವಾನುಮತಿ ಕೋರಿದ್ದಾರೆ. ಈ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 60 ಆರ್.ಇ.ಹೆಚ್. 2006, ಬೆಂಗಳೂರು, ದಿನಾಂಕ:28ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ತಿಳಿಸಿರುವ ಪರಿಸ್ಥಿತಿಯಲ್ಲಿ ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯಿಂದ ಈಗ ನಿರ್ಮಿಸಲಾಗುತ್ತಿರುವ 86 ಅಂಗಡಿಗಳನ್ನು ಪೂರ್ಣಗೊಳಿಸಲು ಬಿಜಾಪುರ ಡಿ.ಸಿ.ಸಿ. ಬ್ಯಾಂಕಿನಿಂಧ ವಾರ್ಷಿಕ 9ರಷ್ಟು ಸರಳ ಬಡ್ಡಿ ಆಧಾರದ ಮೇಲೆ ಒಟ್ಟು ರೂ. 33.00 ಲಕ್ಷ ರೂಪಾಯಿಗಳನ್ನು ಸಾಲ ಪಡೆಯಲು ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟು ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು:**

1. ಈ ಸಾಲಕ್ಕೆ ಸರ್ಕಾರದಿಂದ ಗ್ಯಾರಂಟಿ ಪತ್ರ ನೀಡಲಾಗುವುದಿಲ್ಲ.
2. ಈ ಸಾಲ ತೀರಿಸಲು ಸರ್ಕಾರದಿಂದ ಹಣಕಾಸಿನ ಸಹಾಯ ಕೊಡಲಾಗುವುದಿಲ್ಲ.
3. ಈ ಸಾಲ ತೀರಿಸಲು ಮಂಡಳಿಯ ಇತರ ಆದಾಯದ ಮೂಲಗಳಿಂದ ಹಣವನ್ನು ಬಳಸಿಕೊಳ್ಳತಕ್ಕದ್ದಲ್ಲ.
4. ಈಗ ನಿರ್ಮಿಸಲಾಗುತ್ತಿರುವ ಅಂಗಡಿಗಳಿಂದ ಬರತಕ್ಕ ಬಾಡಿಗೆಯ ಹಣದಿಂದ ಮತ್ತು ಹಿನ್ನೆಲೆಯಲ್ಲಿ ತಿಳಿಸಿದ ಷರತ್ತಿನಂತೆ ಸಾಲವನ್ನು ತೀರುವಳಿ ಮಾಡತಕ್ಕದ್ದು.

ಮೇಲ್ಕಂಡ ಷರತ್ತುಗಳಿಗೆ ಒಳಪಟ್ಟು ಸದರಿ ಸಾಲವನ್ನು ಪಡೆಯಲು ಕೂಡಲ ಸಂಗಮ ಅಭಿವೃದ್ಧಿ ಮಂಡಳಿಗೆ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎಂ. ಜಾಮ್‌ದಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ.

ಪಿ.ಆರ್.562

## ಕಾರ್ಮಿಕ ಸಚಿವಾಲಯ

**ವಿಷಯ:** ಸೆಂಟರ್ ಆಫ್ ಎಕ್ಸ್‌ಲೆನ್ಸ್ ಕಾರ್ಯಕ್ರಮದಡಿ ರಾಜ್ಯದ 6 ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಡಿ.ಜಿ. ಎಸ್. ಅಂಡ್ ಡಿ. ದರ ಕರಾರು ಅಡಿಯಲ್ಲಿ ಕಂಪ್ಯೂಟರ್ ಉಪಕರಣಗಳ ಖರೀದಿ ಬಗ್ಗೆ ಆದೇಶ.

**ಓದಲಾಗಿದೆ :** (1) ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಅವರ ಪತ್ರ ಸಂಖ್ಯೆ: ಉತಇ/ ತರಬೇತಿ/ ಖರೀದಿ-3/ ವಿವ-32/ ಸಿ.ಓ.ಇ./ 2005-06, ದಿನಾಂಕ: 16.03.2006.

(2) ಡಿ.ಜಿ.ಇ.ಟಿ. ಪತ್ರ ಸಂಖ್ಯೆ: ಟಿಜಿಇಟಿ-35(4)(51)/ 2005-ಸಿಪಿಐಯು-ಪಿಸಿಟಿ ದಿನಾಂಕ: 20.12.2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ದಿನಾಂಕ: 16.03.2006ರ ಪತ್ರದಲ್ಲಿ, ಕೇಂದ್ರ ಸರ್ಕಾರದ ನೆರವಿನೊಂದಿಗೆ ಮೊದಲನೇ ಹಂತದಲ್ಲಿ ರಾಜ್ಯದ 6 ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಣಗೊಳಿಸಲು ಉದ್ದೇಶಿಸಲಾಗಿದ್ದು, ಈ ಉದ್ದೇಶಕ್ಕಾಗಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬೆಂಗಳೂರು-22, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬೆಂಗಳೂರು-29, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಹಾಸನ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಗುಲ್ಬರ್ಗಾ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮೈಸೂರು-7 ಮತ್ತು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಹುಬ್ಬಳ್ಳಿ ಗಳಿಗೆ ಡಿ.ಜಿ.ಇ.ಟಿ. ಪಠ್ಯಸೂಚಿಯನ್ವಯ ಅವಶ್ಯಕ ಯಂತ್ರೋಪಕರಣಗಳನ್ನು ಖರೀದಿಸಿ ಒದಗಿಸಬೇಕಾಗಿರುತ್ತದೆಂದು ನಿರ್ದೇಶಕರು ತಿಳಿಸಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಡಿ.ಜಿ.ಇ.ಟಿ.ಯಿಂದ ರೂ.171.6 ಲಕ್ಷ ಅನುದಾನವನ್ನು ಮೊದಲನೇ ಹಂತದಲ್ಲಿ ಯಂತ್ರೋಪಕರಣಗಳ ಖರೀದಿಗೆಂದು ನಿಗದಿಪಡಿಸಲಾಗಿರುತ್ತದೆ. ರಾಜ್ಯ ಸರ್ಕಾರವು ಪೂರಕ ಅನುದಾನದಡಿ ರೂ.100 ಲಕ್ಷ ಅನುದಾನವನ್ನು ಸದರಿ ಯೋಜನೆಗೆ ನಿಗದಿಪಡಿಸಿರುತ್ತದೆ. ಮೇಲ್ಕಂಡ ಕಾರ್ಯಕ್ರಮದಲ್ಲಿ ಕೇಂದ್ರ ಸರ್ಕಾರ ಶೇ.75 ಮತ್ತು ರಾಜ್ಯ ಸರ್ಕಾರ ಶೇ.25ರಷ್ಟು ಅನುದಾನ ಭರಿಸಬೇಕಾಗಿರುತ್ತದೆ.

ಡಿ.ಜಿ.ಇ.ಟಿ. ಪಠ್ಯಸೂಚಿಯನ್ವಯ ಕಂಪ್ಯೂಟರ್ ಉಪಕರಣಗಳನ್ನು ಖರೀದಿಸಿ ಒದಗಿಸಲು ಟಿ.ಎ.ಪಿ. ಸಂಸ್ಥೆಯಿಂದ ಅನುಮೋದನೆ ಪಡೆದು ಪರಿಷ್ಕೃತ ಪ್ರಸ್ತಾವನೆಯಂತೆ ಡಿ.ಜಿ.ಎಸ್. ಅಂಡ್ ಡಿ. ನವದೆಹಲಿಯಿಂದ ಅನುಮೋದನೆಗೊಂಡಿರುವ ಮೆ. IBM, Bangalore ರವರ ಅಧಿಕೃತ ಸರಬರಾಜುದಾರರಾದ ಮೆ. ಮೈಕ್ರೋ ಕ್ಲಿನಿಕ್, ಬೆಂಗಳೂರು ರವರಿಂದ 6 ಕೈಗಾರಿಕಾ ತರಬೇತಿ ಸಂಸ್ಥೆಗಳಿಗೂ ಖರೀದಿ ಅನುಸೂಚಿಯಲ್ಲಿರುವಂತೆ ಒಟ್ಟು ರೂ. 22,11,113/- (ರೂ. ಇಪ್ಪತ್ತೆರಡು ಲಕ್ಷದ ಹನ್ನೊಂದು ಸಾವಿರದ ನೂರ ಹದಿಮೂರು ಮಾತ್ರ)ಗಳ ವೆಚ್ಚದಲ್ಲಿ ಖರೀದಿಸಿ ಒದಗಿಸಲು ನಿರ್ದೇಶಕರು ಅನುಮೋದನೆ ಕೋರಿರುತ್ತಾರೆ.

ತತ್ಸಂಬಂಧದ ವೆಚ್ಚವನ್ನು ಸೆಂಟರ್ ಆಫ್ ಎಕ್ಸ್‌ಲೆನ್ಸ್ ಅನುಷ್ಠಾನದಡಿ ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನ ಲೆಕ್ಕ ಶೀರ್ಷಿಕೆ 2230-03-101-0-26-125 Modernisation ಅಡಿಯಲ್ಲಿ ಲಭ್ಯವಿರುವ ಅನುದಾನದಲ್ಲಿ ಭರಿಸಲಾಗುವುದೆಂದು ನಿರ್ದೇಶಕರು ತಿಳಿಸಿದ್ದಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಕಾಇ 140 ಇಟಿಎ 2004 (ಭಾಗ), ಬೆಂಗಳೂರು, ದಿನಾಂಕ:29ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕೇಂದ್ರದ ಪಾಲು 17.16 ಲಕ್ಷ ಬಿಡುಗಡೆಯಾಗಿರುವುದರಿಂದ ಮೆ. I.B.M., Bangalore ಅವರಿಂದ 6 ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಖರೀದಿ ಅನುಸೂಚಿಯಲ್ಲಿರುವಂತೆ ರೂ.22,11,113/- (ರೂ. ಇಪ್ಪತ್ತೆರಡು ಲಕ್ಷದ ಹನ್ನೊಂದು ಸಾವಿರದ ನೂರ ಹದಿಮೂರು ಮಾತ್ರ)ಗಳ ವೆಚ್ಚದಲ್ಲಿ ಖರೀದಿಸಿ ಒದಗಿಸಲು ಸರ್ಕಾರ ಮಂಜೂರಾತಿ ನೀಡಿದೆ.

ಪ್ರಸ್ತಾವನೆಗೆ ಸಂಬಂಧಪಟ್ಟಂತೆ ಕೇಂದ್ರದ ಪಾಲು ರೂ.17.16 ಲಕ್ಷಗಳು ಬಿಡುಗಡೆ ಆಗಿರುವುದರಿಂದ ರು.22,11,113/-ಗಳ ವೆಚ್ಚವನ್ನು Centre of Excellence ಅನುಷ್ಠಾನದಡಿ ಲೆಕ್ಕಶೀರ್ಷಿಕೆ 2230-03-101-0-26-125 (Modernization) ಅಡಿಯಲ್ಲಿ ಲಭ್ಯವಿರುವ ಅನುದಾನದಲ್ಲಿ ಭರಿಸಲು ತಿಳಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಕಕಾ 31 ಆಂಆಸ 2006 ದಿನಾಂಕ: 27.03.2006ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಟಿ. ಶ್ರೀನಿವಾಸನ್**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

ಪಿ.ಆರ್.563

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಮುಖ್ಯಮಂತ್ರಿಯವರ ಕಾರ್ಯಾಲಯದ ಶಾಖಾಧಿಕಾರಿ ಹುದ್ದೆಯನ್ನು ಗ್ರೂಪ್ 'ಎ' ವೃಂದಕ್ಕೆ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ:PSCM/194/2006 ದಿನಾಂಕ: 14.03.2006.

**ಪ್ರಸ್ತಾವನೆ:**

ಮೇಲೆ ಓದಲಾದ ಸಂಖ್ಯೆ: PSCM/194/2006 ದಿನಾಂಕ:14.03.2006ರ ಟಿಪ್ಪಣಿಯಲ್ಲಿ ಮುಖ್ಯಮಂತ್ರಿಯವರ ಕಾರ್ಯಾಲಯದ ಶಾಖಾಧಿಕಾರಿ ಹುದ್ದೆಯನ್ನು ಗ್ರೂಪ್ 'ಎ' ವೃಂದಕ್ಕೆ ಮೇಲ್ದರ್ಜೆಗೇರಿಸಬೇಕೆಂದು ಕೋರಿಕೆ ಇದೆ. ಅದರನ್ವಯ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 108 ಸಆಸೇ 2006, ಬೆಂಗಳೂರು, ದಿನಾಂಕ:31ನೇ ಮಾರ್ಚ್, 2006**

ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರ ಆಪ್ತಶಾಖೆಯ ಒಂದು ಶಾಖಾಧಿಕಾರಿಯ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಗ್ರೂಪ್ 'ಎ' ಅಧೀನ ಕಾರ್ಯದರ್ಶಿ ವೃಂದಕ್ಕೆ ಮೇಲ್ದರ್ಜೆಗೇರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ: FD 642 Exp.5/2006 ದಿನಾಂಕ: 31.03.2006ರಂದು ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2)

ಪಿ.ಆರ್.564

**ಆರ್ಥಿಕ ಸಚಿವಾಲಯ**

**ವಿಷಯ**: ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ**: ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 48 ಎಸ್‌ಆರ್‌ಪಿ 2005, ದಿನಾಂಕ: 28ನೇ ಅಕ್ಟೋಬರ್ 2005.

**ಆದೇಶ ಸಂಖ್ಯೆ: ಎಫ್‌ಡಿ 15 ಎಸ್‌ಆರ್‌ಪಿ 2006, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2006**

ಸರ್ಕಾರವು ದಿನಾಂಕ 1–1–2006 ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ.71 ರಿಂದ ಶೇ.74 ಕ್ಕೆ ಹೆಚ್ಚಿಸಿ ಮಂಜೂರು ಮಾಡಿದೆ.

2. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯನ್ನು **ಜನವರಿ 2006** ರಿಂದ ಮುಂದಕ್ಕೆ ಮತ್ತು ಮುಂದೆ ಮರು ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.

3. ಸರ್ಕಾರದ ಮತ್ತು ಜಿಲ್ಲಾ ಪಂಚಾಯತ್‌ಗಳ ಪೂರ್ಣಾವಧಿ ನೌಕರರಿಗೆ, ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ವರ್ಕ್‌ಚಾರ್ಜ್ ನೌಕರರಿಗೆ ಹಾಗೂ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ನೌಕರರುಗಳಿಗೆ ಈ ಆದೇಶ ಅನ್ವಯಿಸುತ್ತದೆ. ಈ ಆದೇಶವು ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಮತ್ತು ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಯಲ್ಲಿರುವ ಬೋಧಕ ಸಿಬ್ಬಂದಿ, ಗ್ರಂಥಪಾಲಕರು ಮತ್ತು ದೈಹಿಕ ಶಿಕ್ಷಣ ಸಿಬ್ಬಂದಿಗೂ ಅನ್ವಯಿಸುತ್ತದೆ.

4. ಈ ಆದೇಶದ ಉದ್ದೇಶಗಳಿಗಾಗಿ ಮೂಲವೇತನ ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುವ ವೇತನ ಮತ್ತು ಅದರಲ್ಲಿ,

(ಅ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಸ್ಥಗಿತ ವೇತನ ಬಡ್ತಿಯನ್ನು ನೀಡಲಾಗಿದ್ದರೆ, ಆ ಸ್ಥಗಿತ ವೇತನ ಬಡ್ತಿ.

(ಆ) 1999ರ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ 7ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಅವನಿಗೆ ನೀಡಲಾದ ವೈಯಕ್ತಿಕ ವೇತನ, ಯಾವುದಾದರೂ ಇದ್ದರೆ, ಆ ವೈಯಕ್ತಿಕ ವೇತನ ಸೇರುತ್ತವೆ.

5. ಮೂಲ ವೇತನಕ್ಕೆ ಮೇಲೆ ಸೂಚಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

6. ಪೂರ್ವ ಪರಿಷ್ಕೃತ ಯು.ಜಿ.ಸಿ., ಎ.ಐ.ಸಿ.ಟಿ.ಇ. ಮತ್ತು ಐ.ಸಿ.ಎ.ಆರ್. ವೇತನ ಶ್ರೇಣಿಗಳಲ್ಲಿ ಮುಂದುವರಿಯುತ್ತಿರುವ ಬೋಧಕ ಸಿಬ್ಬಂದಿ, ದೈಹಿಕ ಶಿಕ್ಷಣ ಸಿಬ್ಬಂದಿ ಹಾಗೂ ಗ್ರಂಥಪಾಲಕರ ಪ್ರಕರಣಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 96 ದಿನಾಂಕ 8–5–1996 ರಲ್ಲಿ ದಿನಾಂಕ 1–1–1996ರ ವರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯು ಸಹ ಮೂಲ ವೇತನದಲ್ಲಿ ಸೇರುತ್ತದೆ.

7. ತುಟ್ಟಿಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

8. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಭಿನ್ನ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಸರ್ಕಾರದ ಉಪಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು–2).

**FINANCE SECRETARIAT**

**SUB:** Dearness Allowance – Revision of rates.

**READ:** G.O.No. FD 48 SRP 2005, DATED: 28th OCTOBER 2005

**ORDER NO. FD 15 SRP 2006, BANGALORE, DATED: 27th APRIL 2006.**

Government are pleased to sanction increase in the rates of Dearness Allowance from existing **71%** to **74%** of the basic pay to the State Government employees with effect from 1st January 2006.

2. The increase in Dearness Allowance admissible under this order is payable in cash from the month of **January 2006** onwards until further orders.

3. These orders will apply to the full time Government employees, employees of Zilla Panchayats, work charged employees on regular time scales of pay, full time employees of aided educational Institutions and Universities who are on regular time scales of pay. These orders will also apply to the Judicial Officers who are on FNJPC scales of pay and to the Teaching Staff, Librarians and Physical Education Personnel who are on UGC/AICTE/ICAR scales of pay.

4. For the purpose of this order, the term 'Basic Pay' means, pay drawn by a Government Employee in the scale of pay applicable to the post held by him and includes:-

(a) Stagnation increment, if any, granted to him above the maximum of the scale of pay.

(b) Personal Pay, if any, granted to him under sub-rule (3) of Rule 7 of the Karnataka Civil Services (Revised Pay) Rules, 1999.

5. Basic Pay shall not include any emoluments other than those specified above.

6. In respect of Teachers, Librarians, Physical Education Personnel who are still continuing in the pre-revised UGC, AICTE and ICAR scales of pay, basic pay includes Dearness Allowance sanctioned up to 1.1.1996 vide G.O. No. FD 8 SRP 96 dated 8.5.1996.

7. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

8. The Dearness Allowance will be shown as a distinct element of remuneration and will not be treated as pay for any purpose.

By Order and in the name of the Governor of Karnataka,

**N.T. NAIK**

P.R. 695

Deputy Secretary to Government,
Finance Department (Services-2).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಸ್.ಬಾಲಸುಬ್ರಹ್ಮಣ್ಯಸ್ವಾಮಿ, ಆರ್.ಪಿ.ಎಸ್.ಐ., ಬೆಂಗಳೂರು ದಂಡು ರೈಲ್ವೆ ಪೊಲೀಸ್ ಠಾಣೆ, ರವರು ಸರ್ಕಾರಕ್ಕೆ ಸಲ್ಲಿಸಿಕೊಂಡಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರೈಲ್ವೇಸ್, ಬೆಂಗಳೂರು, ಇವರ ಆದೇಶ ಸಂಖ್ಯೆ:ಪಿಆರ್-87/2003-04, ದಿನಾಂಕ:29-06-2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರೈಲ್ವೇಸ್, ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ/ಮೇ/10/2004, ದಿನಾಂಕ:06-10-2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18-12-2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,ಬೆಂಗಳೂರು ಇವರ ಪತ್ರ ಸಂಖ್ಯೆ:ಅಪೀಲು/2/2/2005, ದಿನಾಂಕ:16-03-2005 ಮತ್ತು 07-11-2005.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ/198/ಸಿಎಸ್‌ಎಸ್/2005, ದಿನಾಂಕ:22-03-2006.

**ಪ್ರಸ್ತಾವನೆ:**

ಶ್ರೀ ಎಸ್.ಬಾಲಸುಬ್ರಹ್ಮಣ್ಯಸ್ವಾಮಿ, ಆರ್‌ಪಿಎಸ್‌ಐ, ಬೆಂಗಳೂರು ದಂಡು ರೈಲ್ವೆ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಎಸ್.ಬಾಲಸುಬ್ರಹ್ಮಣ್ಯಸ್ವಾಮಿ, ಪಿಎಸ್‌ಐ, ಬಿ.ಎನ್.ಸಿ. ರೈಲ್ವೆ ಪೊಲೀಸ್ ಠಾಣೆ, ರವರೇ, ನೀವು ಒಬ್ಬ ಜವಾಬ್ದಾರಿಯುತ ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿರುವ ಅಧಿಕಾರಿಯಾಗಿ, ನಿಮಗೆ ಜಿಲ್ಲಾ ಕಚೇರಿಯ ಪತ್ರ ಸಂಖ್ಯೆ:ಸಿಬಿ-1:66: ಎಸ್‌ಆರ್‌ಪಿ/2003-04, ದಿನಾಂಕ:01-12-2003ರಲ್ಲಿ ಜ್ಞಾಪನ ಪತ್ರದ ಮುಖೇನ ವೈಯಕ್ತಿಕವಾಗಿ ರೈಲುಗಾಡಿಯ ಕಾಯ್ದಿರಿಸಿರುವ ಬೋಗಿಗಳಲ್ಲಿ ರೈಲು ನಿಲ್ದಾಣದ ವೇದಿಕೆಗಳಲ್ಲಿ ದಾಳಿ ಮಾಡಿ ಲಘು ಪ್ರಕರಣಗಳನ್ನು ದಾಖಲು ಮಾಡಲು ಸಾಕಷ್ಟು ಬಾರಿ ಪುನ: ಪುನ: ತಿಳಿಸಿದ್ದರೂ, ಸಹ ನೀವು ದಿನಾಂಕ:07-03-2004, 08-03-2004, ಮತ್ತು 09-03-2004ರಂದು ಯಾವುದೇ ವೈಯಕ್ತಿಕ ದಾಳಿಯನ್ನು ಮಾಡದೇ, ಯಾವ ಲಘು ಪ್ರಕರಣಗಳನ್ನು ದಾಖಲು ಮಾಡದೇ, ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ ಮತ್ತು ತೀವ್ರ ನಿರ್ಲಕ್ಷತೆ ತೋರ್ಪಡಿಸಿರುತ್ತೀರಿ ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರೈಲ್ವೇಸ್, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29-06-2004ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೇಸ್ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:06-10-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ದೋಷಾರೋಪಣೆಯಲ್ಲಿ ತಿಳಿಸಿರುವ ದಿನಾಂಕಗಳಂದು, ಒಂದು ದಿನ ಸಾರ್ವತ್ರಿಕ ರಜೆ ಇದ್ದ ಕಾರಣ, ನ್ಯಾಯಾಲಯಕ್ಕೂ ರಜೆ ಇದ್ದ ಕಾರಣ, ಇನ್ನೊಂದು ದಿನ ವಾರಸುದಾರರಿಲ್ಲದ ಶವದ ದಫನ್ ಸಂಬಂಧ ಬೌರಿಂಗ್ ಆಸ್ಪತ್ರೆಗೆ ತೆರಳಿದ್ದು ಮತ್ತು ಮೂರನೇ ದಿನದಂದು, ದಾಖಲೆಗಳೊಂದಿಗೆ ಮೇಲಧಿಕಾರಿಗೆ ವರದಿ ಸಲ್ಲಿಸಿದ್ದು ಕಂಡುಬರುತ್ತದೆ. ಅರ್ಜಿದಾರರು 1968ರಲ್ಲಿ ಕರ್ತವ್ಯಕ್ಕೆ ಸೇರಿದ್ದು, ತಮ್ಮ 36-37 ವರ್ಷಗಳ ಸುದೀರ್ಘವಾದ ಸೇವಾ ಅವಧಿಯಲ್ಲಿ ಯಾವುದೇ ಗುರುತರ ಆರೋಪಗಳನ್ನು ಎಸಗಿರುವುದಿಲ್ಲವಾದ್ದರಿಂದ ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನಾ ಆದೇಶವನ್ನು ರದ್ದುಪಡಿಸಿ,

ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಲು ಹಾಗೂ ಅವರಿಗೆ `ವಾಗ್ದಂಡನೆ` ಶಿಕ್ಷೆಯನ್ನು ವಿಧಿಸಲು ಸರ್ಕಾರವು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:22-03-2006 ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿರುವ ಮಾರ್ಪಾಡಿಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 229 ಪೊಸಿಅ 2005 ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:29-06-2004ರ ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಿ, ಶ್ರೀ ಎಸ್.ಬಾಲಸುಬ್ರಹ್ಮಣ್ಯಸ್ವಾಮಿ, ಆರ್‌ಪಿಎಸ್ಐ., ಬೆಂಗಳೂರು ದಂಡು ರೈಲ್ವೆ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:18-12-2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆಗೊಳಿಸಿ, ಸಕ್ರಮಗೊಳಿಸಲಾಗಿದೆ. ಇನ್ನು ಮುಂದೆ ಜಾಗರೂಕತೆಯಿಂದ ಕರ್ತವ್ಯನಿರ್ವಹಿಸಲು `ವಾಗ್ದಂಡನೆ` ವಿಧಿಸಲಾಗಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:22-03-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 612

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಚೆಲುವೇಗೌಡ, ಎ.ಎಸ್.ಐ., ಮಹಾಲಕ್ಷ್ಮೀ ಪೊಲೀಸ್ ಠಾಣೆ, ಬೆಂಗಳೂರು ರವರ ಪರಿಷ್ಕೃತ ಮೇಲ್ಮನವಿ.

**ಓದಲಾಗಿದೆ**:
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಉತ್ತರ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 83/ಡಿಇ/ಆರ್-7/ಡಿಸಿಪಿ(ಉ)2000, ದಿನಾಂಕ:09-11-2000.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್, ಬೆಂಗಳೂರು, ಇವರ ಆದೇಶ ಸಂಖ್ಯೆ: 34/ಅಪೀಲು/2000-2001, ದಿನಾಂಕ:27-11-2001.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:31-05-2002.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಅಪೀಲು/2/27/2002-03, ದಿನಾಂಕ:23-10-2002 ಮತ್ತು 08-07-2005.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ/205/ಸಿಎನ್‌ಎಸ್/2005, ದಿನಾಂಕ:16-03-2006.

**ಪ್ರಸ್ತಾವನೆ:**

ಶ್ರೀ ಚೆಲುವೇಗೌಡ, ಎಎಸ್ಐ ಮಲ್ಲೇಶ್ವರಂ ಉಪ ವಿಭಾಗ, ಮಹಾಲಕ್ಷ್ಮಿ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ನೀವು ಮಲ್ಲೇಶ್ವರಂ ಉಪ ವಿಭಾಗದ ಲೆಕ್ಕ ಬರಹಗಾರರಾಗಿ, ಓ.ಓ.ಡಿ.ಯಾಗಿ ಮಲ್ಲೇಶ್ವರಂ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನೀವು ಪ್ರತಿ ತಿಂಗಳು ಮಲ್ಲೇಶ್ವರಂ ಉಪ ವಿಭಾಗದ ಸಿಬ್ಬಂದಿಗಳ ವೇತನ, ಕೆ.ಜಿ.ಐ.ಡಿ., ಜಿ.ಪಿ.ಎಫ್., ವಾರ್ಷಿಕ ವೇತನ ಬದಲಾವಣೆಗಳ ಬಗ್ಗೆ ಮಾಹಿತಿಯನ್ನು ಈ ಕಛೇರಿಯಿಂದ ಪಡೆದು, ಪೊಲೀಸ್ ಕಮೀಷನರ್ ರವರ ಕಛೇರಿಯ ಕಂಪ್ಯೂಟರ್‌ನಲ್ಲಿ ಮಾಹಿತಿ ನೀಡಿ ಬೆಲೆ ತಯಾರಿಸುತ್ತಿದ್ದು, ಹೆಚ್.ಸಿ.677 ಕೃಷ್ಣಪ್ಪ, ಶ್ರೀರಾಂಪುರ ಪೊಲೀಸ್ ಠಾಣೆ, ರವರಿಗೆ ಭಾಗಶ: ಜಿ.ಪಿ.ಎಫ್., ಹಣ ಮಂಜೂರಾಗಿದ್ದು, ಅದನ್ನು ನೀವೇ ಆರ್.ಬಿ.ಐ. ನಿಂದ ಡ್ರಾ ಮಾಡಿ ತಂದು ಅವರಿಗೆ ಬಟವಾಡೆ ಮಾಡಿದ್ದು, ಈ ಬಗ್ಗೆ ನಗದು ವಿಭಾಗದ ವಿಷಯ ಪಾಲಕರು, ಸದರಿ ಹಣ ಭಾಗಶ: ಜಿ.ಪಿ.ಎಫ್., ಎಂದು ತಿಳಿಸಿದ್ದು, ಆ ಬಗ್ಗೆ ನೀವು ಗಮನಹರಿಸಿರುವುದಿಲ್ಲ. ಅಲ್ಲದೇ ಕಂಪ್ಯೂಟರ್ ಬದಲಾವಣೆ ವರದಿ ತಂದಾಗಲೂ ಸಹ ಸಂಬಂಧಿಸಿದ ಜಿ.ಪಿ.ಎಫ್., ವಿಷಯ ಪಾಲಕರಿಂದ ಮಾಹಿತಿ ಪಡೆದು ಕ್ರಮ ತೆಗೆದುಕೊಳ್ಳಲು ತಿಳಿಸಿದ್ದರೂ ಸಹ ನೀವು ಇದು ಯಾವುದನ್ನು ಲೆಕ್ಕಿಸದೇ ನಿಮ್ಮ ಇಚ್ಛಾನುಸಾರ ಈ ಕಛೇರಿಯಿಂದ ಯಾವುದೇ ರೀತಿ ಜಿ.ಪಿ.ಎಫ್., ಹಣ ಕಂತುಗಳಲ್ಲಿ ಹಿಡಿಯಬೇಕು, ಎಷ್ಟು ಕಂತುಗಳಲ್ಲಿ ಹಿಡಿಯಬೇಕು ಎಂಬುದನ್ನು ತಿಳಿಸದಿದ್ದರೂ ನೀವೇ ಸ್ವಇಚ್ಛೆಯಿಂದ ಹೆಚ್‌ಸಿ-677 ರವರ ಜಿಪಿಎಫ್ ಭಾಗಶ: ಹಣದ ಮೊತ್ತವನ್ನು ನೀವೆ 40 ಕಂತುಗಳಿಗೆ ಭಾಗಿಸಿ, ತಿಂಗಳಿಗೆ ರೂ.1325-00 ಗಳಂತೆ ಮೇ 2000 ತಿಂಗಳ ಸಂಬಳದಲ್ಲಿ ಕಟಾಯಿಸಿರುತ್ತೀರಿ. ಇದು ನಿಮ್ಮ ಕರ್ತವ್ಯದಲ್ಲಿನ ಬೇಜವಾಬ್ದಾರಿತನ ಉದ್ಧಟತನ ಮತ್ತು ನಿರ್ಲಕ್ಷತೆಯನ್ನು ಎತ್ತಿ ತೋರಿಸುತ್ತದೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಉತ್ತರ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:09-11-2000ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ

ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:27-11-2001ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಭಾಗಶ: ಜಿಪಿಎಫ್ ಹಣ ಮಂಜೂರಾಗಿರುವುದನ್ನು ಜಿಪಿಎಫ್ ನ ಮುಂಗಡ ಹಣ ಎಂದು ಭಾವಿಸಿ, ಮಾಸಿಕ ಕಂತುಗಳಲ್ಲಿ ಕಟಾಯಿಸಲು ಕ್ರಮ ಕೈಗೊಂಡಿದ್ದು, ಇದರಿಂದ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು, ಕಣ್ತಪ್ಪಿನಿಂದಾದ ತಪ್ಪಿಗೆ ಹೆಚ್ಚಿನ ಶಿಕ್ಷೆ ವಿಧಿಸಲಾಗಿದೆ ಎಂದು ಭಾವಿಸಿ, ಶಿಸ್ತು ಪ್ರಾಧಿಕಾರಿಯ ದಂಡನಾ ಆದೇಶವನ್ನು ರದ್ದುಪಡಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:16-03-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 335 ಪೊಸಿಅ 2005 ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:09-11-2000ರ ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ, ಶ್ರೀ ಚೆಲುವೇಗೌಡ, ಎಎಸ್ಐ ಮಹಾಲಕ್ಷ್ಮಿ ಪೊಲೀಸ್ ಠಾಣೆ, (OOD ಮಲ್ಲೇಶ್ವರಂ ಪೊಲೀಸ್ ಠಾಣೆ) ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:31-05-2002ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಇವರ ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಿ ಎಲ್ಲಾ ವಾರ್ಷಿಕ ವೇತನ ಬಡ್ತಿಗಳನ್ನು ಪಡೆಯಲು ಆದೇಶಿಸಿದೆ.

ಅಲ್ಲದೇ ಇವರು ಸರ್ಕಾರಕ್ಕೆ ನೀಡಿದ ಮನವಿಯಲ್ಲಿ ಮೇಲಾಧಿಕಾರಿಗಳ ವಿರುದ್ಧ ತೀಕ್ಷ್ಣಕರವಾದ ಹೇಳಿಕೆಗಳನ್ನು ಮಾಡಿರುವುದು ಒಬ್ಬ ಸರ್ಕಾರಿ ನೌಕರನ ನಡತೆಗೆ ಸಲ್ಲದ ವಿಚಾರವಾಗಿರುವುದರಿಂದ, ಇನ್ನು ಮುಂದೆ ಇಂತಹ ಹೇಳಿಕೆಗಳನ್ನು ಮಾಡಬಾರದೆಂದು ಈ ಮೂಲಕ ಎಚ್ಚರಿಕೆ ನೀಡಲಾಗಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:16-03-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 613 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಎಂ.ಹೆಚ್.ಜಾವೂರ, ಮಾಜಿ ಸಿಪಿಸಿ-849, ಕಿತ್ತೂರು ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**:
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ:ಸಿಬ್ಬಂದಿ-2/ಇವಿ-06/2003/ಆಪು ಸಂಖ್ಯೆ:130/2004, ದಿನಾಂಕ:26-02-2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು/33/ಉವ/2004, ದಿನಾಂಕ:25-01-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13-09-05.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/124/2005, ದಿನಾಂಕ:21-01-2005 ಮತ್ತು 02-01-2006.

**ಪ್ರಸ್ತಾವನೆ:**

ಶ್ರೀ ಎಂ.ಹೆಚ್.ಜಾವೂರ, ಮಾಜಿ ಸಿಪಿಸಿ-849, ಕಿತ್ತೂರು ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಅ.ಪೊ.ಅ.-ಸಿಪಿಸಿ-849 ಎಂ.ಎಚ್. ಜಾವೂರ, ಕಿತ್ತೂರು ಪೊಲೀಸ್ ಠಾಣೆ, ರವರಾದ ನಿಮಗೆ ಕಿತ್ತೂರ ಪೊಲೀಸ್ ಠಾಣೆಯ ಸಿಹೆಚ್‌ಸಿ-1772, ಸಿಪಿಸಿ-650, 1949, 1947, ಇವರ ಜೊತೆಗೆ ದಿನಾಂಕ:19-11-2002ರಂದು ಶಿರಸಂಗಿ ಜಾತ್ರೆಯ ಬಂದೋಬಸ್ತ್ ಕರ್ತವ್ಯಕ್ಕೆ ನಿಯೋಜಿಸಲಾಗಿತ್ತು. ಸದರಿ ಜಾತ್ರಾ ಬಂದೋಬಸ್ತಿಗೆ ನಿಯೋಜಿಸಲಾಗಿದ್ದ ನಿಮ್ಮನ್ನು ಹೊರತುಪಡಿಸಿ, ಬಂದೋಬಸ್ತಿಗೆ ಹೋದ ಎಲ್ಲಾ ಸಿಬ್ಬಂದಿಯವರು ಬಂದೋಬಸ್ತ್ ಕರ್ತವ್ಯವನ್ನು ಮುಗಿಸಿಕೊಂಡು, ದಿನಾಂಕ:20-11-2002ರಂದು ಮಧ್ಯಾಹ್ನ 13-00 ಘಂಟೆಗೆ ಮರಳಿ ಠಾಣೆಗೆ ಬಂದು ವರದಿ ಮಾಡಿಕೊಂಡಿರುತ್ತಾರೆ. ಆದರೆ, ನೀವು ದಿನಾಂಕ:22-11-2002 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ ಉಳಿದಾಗ, 21 ದಿನಗಳು ಮೇಲ್ಪಟ್ಟಿದ್ದರಿಂದ, ನಿಮ್ಮನ್ನು ಪರಿತ್ಯಾಜ್ಯರೆಂದು ಘೋಷಿಸಿ, ಮಾನ್ಯ ಆರಕ್ಷಕಾಧೀಕ್ಷಕರು, ಬೆಳಗಾವಿ ರವರು ಪತ್ರ ಸಂಖ್ಯೆ:ಸಿಬ್ಬಂದಿ-3/ಪಸೂಪ/21/2002-03 ದಿನಾಂಕ:28-12-2002 ರ ಅಡಿಯಲ್ಲಿ ಪರಿತ್ಯಾಗ ಸೂಚನಾ ಪತ್ರ ಹೊರಡಿಸಿರುವುದನ್ನು ದಿನಾಂಕ:05-01-2003ರಂದು ಸ್ವೀಕರಿಸಿ, ಕೂಡಲೇ ಕರ್ತವ್ಯಕ್ಕೆ ಹಾಜರಾಗಲು ವಿಫಲರಾಗಿ ನಿಮ್ಮ ಗೈರು ಹಾಜರಾತಿ ಮುಂದುವರೆಸಿ, ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:26-02-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ತೆಗೆದು ಹಾಕಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:25-01-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ, ತಿಂಗಳಾನುಗಟ್ಟಲೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದು ಕಂಡು ಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 67 ಪೊಸಿಅ 2006 ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಹೆಚ್.ಜಾವೂರ, ಮಾಜಿ ಸಿಪಿಸಿ-849 ಕಿತ್ತೂರ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 13-09-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 614

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಹಾವೇರಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗದಲ್ಲಿ ಒಂದು ಲೆಕ್ಕ ಶೀರ್ಷಿಕೆಗೆ ಬಿಡುಗಡೆಯಾದ ಅನುದಾನವನ್ನು ಮತ್ತೊಂದು ಲೆಕ್ಕಶೀರ್ಷಿಕೆಗೆ ವೆಚ್ಚ ಮಾಡಿ ನಿಯಮಗಳನ್ನು ಉಲ್ಲಂಘಿಸಿ, ಆರ್ಥಿಕ ಆಶಿಸ್ತು ಉಂಟಾಗಲು ಕಾರಣರಾದ ಶ್ರೀ ಗಿರಿಯಪ್ಪ, ಅಂದಿನ ಲೆಕ್ಕಪರಿಶೋಧನಾಧಿಕಾರಿ ಇವರ ವಿರುದ್ಧ ಸಾಬೀತಾದ ಆರೋಪಗಳಿಗಾಗಿ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1) ಆದೇಶ ಸಂಖ್ಯೆ. ಗ್ರಾಅಪ 13 ಇಎನ್‌ಕ್ಯೂ 02, ದಿ. 20-11-02
2) ಆದೇಶ ಸಂಖ್ಯೆ. ಗ್ರಾಅಪ 13 ಇಎನ್‌ಕ್ಯೂ 02, ದಿ. 24-03-03
3) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರ ಪತ್ರ ಸಂ. ಹಾಜಿಪಂ: ಮುಲೆಅ:ಲೆಸ-3:02-03, ದಿ. 11-03-03, 13-05-03 ಮತ್ತು 27-10-03.
4) ಕಾರಣ ಕೇಳುವ ನೋಟಿಸ್. ಸಂ. ಗ್ರಾಅಪ 13 ಇಎನ್‌ಕ್ಯೂ 02, ದಿ. 17-3-03 ಮತ್ತು 6-4-04.
5) ಸರ್ಕಾರದ ಆದೇಶ ಸಂ. ಗ್ರಾಅಪ 13 ಇಎನ್‌ಕ್ಯೂ 02, ದಿ. 26-5-04.
6) ವಿಚಾರಣಾಧಿಕಾರಿಯವರ ವರದಿ ದಿ. 2-5-05.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶದಲ್ಲಿ 2001-02 ನೇ ಸಾಲಿನ ಹಾಗೂ 2002-03ನೇ ಸಾಲಿನಲ್ಲಿ ಹಾವೇರಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಒಂದು ಲೆಕ್ಕ ಶೀರ್ಷಿಕೆಗೆ ಬಿಡುಗಡೆಯಾದ ಅನುದಾನವನ್ನು ಮತ್ತೊಂದು ಲೆಕ್ಕಶೀರ್ಷಿಕೆಗೆ ವೆಚ್ಚ ಮಾಡಿ ನಿಯಮಗಳನ್ನು ಉಲ್ಲಂಘಿಸಿ ಆರ್ಥಿಕ ಅಶಿಸ್ತು ಉಂಟಾಗಲು ಕಾರಣರಾದ ಶ್ರೀ ಡಿ.ಟಿ. ಹನುಮಂತಪ್ಪ, ಕಾರ್ಯಪಾಲಕ ಇಂಜಿನಿಯರ್, (ಪ್ರಭಾರ) ಹಾಗೂ ಶ್ರೀ ಗಿರಿಯಪ್ಪ, ಲೆಕ್ಕಪರಿಶೋಧನಾಧಿಕಾರಿ, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಸದರಿಯವರುಗಳ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರುಗಳ ಅಮಾನತ್ತನ್ನು ತೆರವುಗೊಳಿಸಿ ಸೇವೆಯಲ್ಲಿ ಪುನರ್ ಸ್ಥಾಪಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರು ಈ ಪ್ರಕರಣಕ್ಕೆ ಕಾರಣರಾದ ಶ್ರೀ ಅಣ್ಣಯ್ಯ ಶೇರುಗಾರ, ಕಾರ್ಯಪಾಲಕ ಇಂಜಿನಿಯರ್; ಶ್ರೀ ಡಿ.ಟಿ.ಹನುಮಂತಪ್ಪ, ಕಾರ್ಯಪಾಲಕ ಇಂಜಿನಿಯರ್ (ಪ್ರಭಾರ); ಶ್ರೀ ಗಿರಿಯಪ್ಪ, ಲೆಕ್ಕಪರಿಶೋಧನಾಧಿಕಾರಿ ಮತ್ತು ಶ್ರೀ ಟಿ. ವೆಂಕಟೇಶ್ವರ, ಕಾರ್ಯಪಾಲಕ ಇಂಜಿನಿಯರ್ ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಪ್ರಸ್ತಾವನೆಯನ್ನು ಕರಡು ಆರೋಪ ಪಟ್ಟಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸಿದ್ದರು. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಸದರಿ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ಹೂಡಿ, ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪ ಪಟ್ಟಿ ಜಾರಿ ಮಾಡಿತ್ತು. ಆಪಾದಿತ ಅಧಿಕಾರಿಗಳು ಕಾರಣ ಕೇಳುವ ನೋಟೀಸಿಗೆ ಉತ್ತರಿಸುತ್ತಾ , ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರು. ಆಪಾದಿತರ ಪೈಕಿ ಶ್ರೀ ಅಣ್ಣಯ್ಯ ಶೇರುಗಾರ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ) ಇವರು ದಿ. 11-8-03 ರಂದು ನಿಧನ ಹೊಂದಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ಕೈ ಬಿಟ್ಟು ಉಳಿದಂತೆ ಪ್ರಕರಣದಲ್ಲಿನ ಇತರ ಆಪಾದಿತರ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಲಾಗಿ , ಅವು ಸಮರ್ಪಕವಾಗಿಲ್ಲವೆಂದು ಹಾಗೂ ಮೇಲ್ನೋಟಕ್ಕೆ ಆಪಾದಿತ ಅಧಿಕಾರಿಗಳ ದುರ್ನಡತೆ ಕಂಡು ಬಂದಿದ್ದರಿಂದ, ಆಪಾದನೆಗಳ ಬಗ್ಗೆ ಸತ್ಯಾ ಸತ್ಯತೆಯನ್ನರಿಯುವ ಸಲುವಾಗಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ , ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಆದೇಶದಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯವರನ್ನು ನೇಮಿಸಲಾಗಿತ್ತು. ವಿಚಾರಣಾಧಿಕಾರಿಯವರು ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ದಿ. 2-5-2005 ರ ತಮ್ಮ ವಿಚಾರಣಾ ವರದಿಯಲ್ಲಿ ಶ್ರೀ ಡಿ.ಟಿ. ಹನುಮಂತಪ್ಪ ಮತ್ತು ಶ್ರೀ ಟಿ. ವೆಂಕಟೇಶ್ವರ ಇವರುಗಳ ವಿರುದ್ಧ ಮಾಡಲಾದ ಆರೋಪಗಳು ರುಜುವಾತಾಗಿಲ್ಲವೆಂದು

ಮತ್ತು ಶ್ರೀ ಗಿರಿಯಪ್ಪ ಇವರ ವಿರುದ್ಧ ಮಾಡಲಾದ ಆರು ಆರೋಪಗಳ ಪೈಕಿ ಕೆಳಕಂಡ ಮೂರು ಆರೋಪಗಳು ರುಜುವಾತಾಗಿರುತ್ತವೆ ಎಂದು ವರದಿ ಸಲ್ಲಿಸಿರುತ್ತಾರೆ.

ಶ್ರೀ ಗಿರಿಯಪ್ಪ , ಹಿಂದಿನ ಲೆಕ್ಕ ಪರಿಶೋಧನಾಧಿಕಾರಿ, ಪಂರಾಇಂ ವಿಭಾಗ, ಹಾವೇರಿ ಇವರ ಮೇಲಿನ ರುಜುವಾತಾದ ಮೂರು ಆರೋಪಗಳು ಕೆಳಕಂಡಂತಿವೆ:

1) ರೂ. 55.53 ಲಕ್ಷ ಅನುದಾನವನ್ನು ಆದ್ಯತಾ ವಲಯದಿಂದ (ಕುಡಿಯುವ ನೀರು ಯೋಜನೆ) ಆದ್ಯತಾ ವಲಯವಲ್ಲದ (ರಸ್ತೆ) ಲೆಕ್ಕ ಶೀರ್ಷಿಕೆಗೆ ಮೇಲಾಧಿಕಾರಿಗಳ ಗಮನಕ್ಕೆ ತರದೇ ತಮ್ಮ ಹಂತದಲ್ಲಿಯೇ ವರ್ಗಾಯಿಸಿರುವುದು.
2) ವಿವಿಧ ಲೆಕ್ಕ ಶೀರ್ಷಿಕೆಗಳ ಅಡಿಯಲ್ಲಿ ಒಟ್ಟು ರೂ. 15.245 ಲಕ್ಷ ಅನುದಾನವನ್ನು ಬೇರೆ ಬೇರೆ ಲೆಕ್ಕ ಶೀರ್ಷಿಕೆಗಳಿಗೆ ಮೇಲಾಧಿಕಾರಿಗಳ ಗಮನಕ್ಕೆ ತರದೇ ತಮ್ಮ ಹಂತದಲ್ಲಿಯೇ ವರ್ಗಾಯಿಸಿರುವುದು.
3) ರೂ. 55.53 ಲಕ್ಷ ಅನುದಾನವನ್ನು ದಿ. 31-3-02 ರ ಅಂತ್ಯಕ್ಕೆ ಮಾರ್ಗಪಲ್ಲಟ ಮಾಡಿ ಪೂರ್ತಿಯಾಗಿ ವೆಚ್ಚ ಮಾಡಿದ್ದರೂ, ರೂ. 36.06 ಲಕ್ಷ ಮಾತ್ರ ಖರ್ಚಾಗಿರುವುದಾಗಿ ಕಾರ್ಯ ಬಾಕಿ ರೂ. 19.47 ಲಕ್ಷ ಅನುದಾನಕ್ಕೆ ಮಾನ್ಯತಾ ಅವಧಿಯನ್ನು ವಿಸ್ತರಿಸುವಂತೆ ಸುಳ್ಳು ಮಾಹಿತಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುವುದು.

ವಿಚಾರಣಾಧಿಕಾರಿಯವರ ವರದಿಯನ್ನು ಒಪ್ಪಿ , ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 13 ಇಎನ್‌ಕ್ಯೂ 02, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಂದಿನ ಲೆಕ್ಕಪರಿಶೋಧನಾಧಿಕಾರಿಯಾದ ಶ್ರೀ ಗಿರಿಯಪ್ಪ, ಇವರ ಮೇಲಿನ ರುಜುವಾತಾದ ಆರೋಪಗಳಿಗಾಗಿ ಇವರಿಗೆ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳ ನಿಯಮ 8 (iii) ರಡಿಯಲ್ಲಿ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಮತ್ತು ಹಿಂದಿನ ಕಾರ್ಯಪಾಲಕ ಅಭಿಯಂತರರುಗಳಾದ ಶ್ರೀ ಡಿ.ಟಿ.ಹನುಮಂತಪ್ಪ ಮತ್ತು ಶ್ರೀ ಟಿ. ವೆಂಕಟೇಶ್ವರ ಇವರುಗಳನ್ನು ದೋಷಮುಕ್ತರನ್ನಾಗಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಪಿ.ಆರ್. 601

**ವಿಷಯ:** ಬೀಳಗಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದ ಉಗ್ರಾಣ ಸಾಮಗ್ರಿಗಳ ಕೊರತೆಗೆ ಕಾರಣರಾದ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ದಂಡನೆ ವಿಧಿಸುವ ಬಗ್ಗೆ - ಪರಿಷ್ಕೃತ ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ. ಗ್ರಾಅಪ 12 ಇಎನ್‌ಕ್ಯೂ 98, ದಿ. 19-11-04.
2) ಮಹಾಲೇಖಪಾಲರು ಪತ್ರ ಸಂಖ್ಯೆ. GE II/P2/Vol.H7/2005-06/737 ದಿ. 16-12-05.
3) ಆರ್ಥಿಕ ಇಲಾಖೆಯ ಸ್ಪಷ್ಟೀಕರಣ ಸಂಖ್ಯೆ. FD 1222 ಸೇವೆಗಳು-1/05, ದಿ. 17-10-2005.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರಿ ಆದೇಶ ದಿ: 19-11-2004 ರಲ್ಲಿ ಬೀಳಗಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿನ ಉಗ್ರಾಣ ಸಾಮಗ್ರಿಗಳ ಕೊರತೆಗೆ ಸಂಬಂಧಿಸಿದಂತೆ ಶ್ರೀ ಬಿ.ಎಂ.ಹುನೂರು , ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬಾಗಲಕೋಟೆ ಹಾಲಿ ಕಾರ್ಯಪಾಲಕ ಇಂಜಿನಿಯರ್, ಕೆಬಿಜೆಎನ್‌ಎಲ್ , ಆಲಮಟ್ಟಿ ಮತ್ತು ಶ್ರೀ ಆರ್.ವಿ.ಕಟ್ಟಿ, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ಬೀಳಗಿ (ಹಾಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ಇವರ ಕಚೇರಿ ಜಮಖಂಡಿ) ಇವರ ಮೇಲೆ ಸಾಬೀತಾದ ಆರೋಪಗಳಿಗಾಗಿ ಅವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತವಾದ ರೂ. 12,11,072-00 ಗಳನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8 (iv) ರಂತೆ ಸದರಿಯವರಿಂದ ಸಮನಾಗಿ ವಸೂಲು ಮಾಡುವ ಹಾಗೂ ಕೊರತೆ ಕಂಡು ಬಂದ ದಿನದಿಂದ ಹಣ ವಸೂಲು ಮಾಡುವವರೆಗೆ ಕೊರತೆಯ ಮೊತ್ತದ ಮೇಲೆ ಶೇಕಡ 12 ರಂತೆ ಬಡ್ಡಿ ವಿಧಿಸಲು ಹಾಗೂ ಇವರುಗಳ ಕರ್ತವ್ಯ ಲೋಪಕ್ಕಾಗಿ ಸದರಿ ನಿಯಮಾವಳಿಗಳ ನಿಯಮ 8 (iii) ರಂತೆ ಇವರುಗಳು ಹಾಲಿ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿನ ವೇತನದ 2 ಹಂತಗಳನ್ನು 2 ವರ್ಷಗಳ ಅವಧಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಉಲ್ಲೇಖ (2) ರ ಪತ್ರದಲ್ಲಿ ಮಹಾಲೇಖಪಾಲರು ಈ ಕೆಳಗಿನಂತೆ ಅಭಿಪ್ರಾಯ ಪಟ್ಟಿರುತ್ತಾರೆ.

"In view of the clarification issued by the Finance Department , a revised order of punishment clearly indicating as to whether the Officer is entitled for normal increments during the period of punishment may be forwarded.

Further, as the period of punishment extends beyond the date of retirement, whether the pay has to be restored on the date of retirement may also be clarified, as the officer is due to retire w.e.f. 1-6-06."

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಅ.ಟಿ.ಯಲ್ಲಿ ಆರ್ಥಿಕ ಇಲಾಖೆಯು ಸ್ಪಷ್ಟೀಕರಣ ನೀಡುತ್ತಾ While penalty under Rule 8 (iii) relates to withholding of future annual increments in the time scale of pay held by the concerned Government servant, while passing such an order to this effect, it is also necessary to indicate in the penalty order to this effect, it is also necessary to indicate in the penalty order whether withholding of his next increments will have cumulative effect or not on earning his subsequent increments on expiry of the specified penalty period. Penalty under Rule 8 (iv) (a) relates to reduction of pay to a lower stage in a time scale of pay. Reduction of pay to a lower stage in a time scale of pay is not permissible for an

unspecified period or as a permanent measure as per Rule 59 (1) (b) of the Rules. Further it is also necessary to indicate the intention of the authority in regard to earning of subsequent increment, period of penalty etc., keeping in view the provisions contained vide Rule 59 (1) (a) (i) to (v) before considering the penalty under Rule 8 (iv) (a) of the KCS (CCA) Rules. The penalty orders as issued by the Administrative Departments do not cover these aspects and is inconsistent with the relevant provisions of the above Rules.

In the circumstances of the case, it is hereby clarified as follows:-

Regulation of the pay as done by your office in respect of Sri B.N. Hunur as per rule 8 (iv) (a) of the Rules is not in order since penalty order was issued under Rule 8 (iii) of the CCA Rules ಎಂದು ತಿಳಿಸುತ್ತಾ, ಸದರಿ ಆದೇಶವನ್ನು ಪರಿಷ್ಕರಿಸಲು ಸೂಚಿಸಿದೆ.

ಸರ್ಕಾರವು ವಿಷಯವನ್ನು ಕೂಲಂಕಶವಾಗಿ ಪರಿಶೀಲಿಸಿ, ಈ ಪ್ರಕರಣದಲ್ಲಿ ದಿ. 19-11-2004 ರಂದು ಹೊರಡಿಸಿದ ದಂಡನಾ ಆದೇಶವನ್ನು ಜಾರಿ ಮಾಡಲು ತೊಂದರೆ ಎದುರಾಗುವುದರಿಂದ, ಸದರಿ ಆದೇಶವನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 26ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರಿ ಆದೇಶ ಸಂಖ್ಯೆ . ಗ್ರಾಅಪ 12 ಇಎನ್‌ಕ್ಯೂ 98, ದಿ. 19-11-04 ರಲ್ಲಿ ವಿಧಿಸಿದ ದಂಡನೆ ಆದೇಶವನ್ನು ಪುನರಾವಲೋಕಿಸಿ, ಈ ಕೆಳಕಂಡಂತೆ ಪರಿಷ್ಕೃತ ಆದೇಶ ಮಾಡಲು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ:

**ಆದೇಶ ಸಂಖ್ಯೆ ಗ್ರಾಅಪ 12 ಇಎನ್‌ಕ್ಯೂ 98, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 26ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರಿ ಆದೇಶ ಸಂಖ್ಯೆ . ಗ್ರಾಅಪ 12 ಇಎನ್‌ಕ್ಯೂ 98, ದಿ. 19-11-04 ರಲ್ಲಿ ವಿಧಿಸಿದ ದಂಡನೆ ಆದೇಶವನ್ನು ಪರಿಷ್ಕರಿಸಿ ಶ್ರೀ ಬಿ.ಎಂ.ಹುನೂರು , ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ಬಾಗಲಕೋಟೆ ಹಾಲಿ ಕಾರ್ಯಪಾಲಕ ಇಂಜಿನಿಯರ್, ಕೆಬಿಜೆಎನ್‌ಎಲ್, ಆಲಮಟ್ಟಿ ಮತ್ತು ಶ್ರೀ ಆರ್.ವಿ.ಕಟ್ಟಿ, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ಬೀಳಗಿ (ಹಾಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ಇವರ ಕಚೇರಿ ಜಮಖಂಡಿ) ಇವರ ಮೇಲೆ ಸಾಬೀತಾದ ಆರೋಪಗಳಿಗಾಗಿ ಅವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತವಾದ ರೂ. 12,11,072-00 ಗಳನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8 (iv) ರಂತೆ ಸದರಿಯವರಿಂದ ಸಮನಾಗಿ, ಕೊರತೆ ಕಂಡು ಬಂದ ದಿನದಿಂದ ಹಣ ವಸೂಲು ಮಾಡುವವರೆಗೆ ಕೊರತೆಯ ಮೊತ್ತದ ಮೇಲೆ ಶೇಕಡ 12 ರಂತೆ ಬಡ್ಡಿ ವಿಧಿಸಿ ವಸೂಲಿ ಮಾಡಲು ಹಾಗೂ ಶ್ರೀ ಬಿ.ಎಂ. ಹುನೂರ್ ಇವರ ಕರ್ತವ್ಯ ಲೋಪಕ್ಕಾಗಿ ಸದರಿ ನಿಯಮಾವಳಿಗಳ ನಿಯಮ 8 (iii) ರಂತೆ ಇವರು ಹಾಲಿ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ 2 ವಾರ್ಷಿಕ ವೇತನ ಬಡ್ತಿಗಳನ್ನು ತಡೆಹಿಡಿದಲ್ಲಿ ಅವರಿಂದ ವಸೂಲಾಗುತ್ತಿದ್ದ ಮೊತ್ತದಷ್ಟು ಮೊತ್ತವನ್ನು ಅವರ DCRG ಮತ್ತು ಇತರೆ ನಿವೃತ್ತಿ ಉಪದಾನಗಳಿಂದ ವಸೂಲಿ ಮಾಡಲು ಸರ್ಕಾರವು ಆದೇಶಿಸಿದೆ.

ಶ್ರೀ ಆರ್.ವಿ.ಕಟ್ಟಿ ಇವರ ಕರ್ತವ್ಯ ಲೋಪಕ್ಕಾಗಿ ಸದರಿ ನಿಯಮಾವಳಿಗಳ ನಿಯಮ 8 (iii) ರಂತೆ ಸದರಿಯವರು ಹಾಲಿ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಾಗದಂತೆ ತಡೆಹಿಡಿದು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 602

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ:** ಶ್ರೀ ಬಿ.ವೈ.ಮಾದಿನೂರು, ಅಂದಿನ ಲೆಕ್ಕಾಧೀಕ್ಷಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರ ಮೇಲಿನ ಆರೋಪಗಳನ್ನು ಕೈಬಿಡುವ ಬಗ್ಗೆ - ಆದೇಶ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ. ಗ್ರಾಅಪ 38 ಜಿಪಅ 04, ದಿ. 06-4-2006.
2) ಶ್ರೀ ಬಿ.ವೈ.ಮಾದಿನೂರು , ಅಂದಿನ ಲೆಕ್ಕಾಧೀಕ್ಷಕರು, ಇವರ ದಿ. 11-12-2005 ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ಪತ್ರ ಸಂಖ್ಯೆ. ಜಿಪಂಕೊ:ಸಿಸಿಎ:10:04-05, ದಿ. 8-10-04 ರಲ್ಲಿ ಕೊಪ್ಪಳ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಹಾಗೂ ಅದರ ನಾಲ್ಕು ಉಪ ವಿಭಾಗಗಳಲ್ಲಿ ದಿ. 1-6-87 ರಿಂದ 31-3-2002 ರವರೆಗಿನ ಅವಧಿಯಲ್ಲಿ ಉಗ್ರಾಣ ದಾಸ್ತಾನಿನಲ್ಲಿ ನಡೆದಿರುವ ಉಗ್ರಾಣ ಸಾಮಗ್ರಿಗಳ ಕೊರತೆಯಿಂದಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಲು ಶ್ರೀ ಬಿ.ವೈ.ಮಾದಿನೂರು, ಅಂದಿನ ಲೆಕ್ಕಾಧೀಕ್ಷಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರೊಂದಿಗೆ ಇನ್ನಿತರ ಅಧಿಕಾರಿ / ನೌಕರರುಗಳು ಕಾರಣರೆಂದು ಅವರುಗಳ ಮೇಲಿನ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಶಿಫಾರಸ್ಸು ಮಾಡಿದ್ದರು. ಅದರಂತೆ ಸರ್ಕಾರವು ಇವರುಗಳ ಮೇಲೆ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ ದಿ. 28-10-2005 ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪ ಪಟ್ಟಿ ಜಾರಿ ಮಾಡಿತ್ತು. ಇವರುಗಳು ಸಲ್ಲಿಸಿದ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿ ವಿವರವಾದ ವಿಚಾರಣೆ ನಡೆಸಲು ನಿರ್ಧರಿಸಿ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗದಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ನಿಯಮ 13 ರನ್ವಯ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ 11(2)ರ ರಿತ್ಯ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀ ಟಿ.ಜಿ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.648, 2ನೇ ಕ್ರಾಸ್, 8ನೇ ಮೈನ್, ಬಸವೇಶ್ವರನಗರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರಿತ್ಯ ಸಹಾಯಕ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಕೊಪ್ಪಳ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಲಾಗಿತ್ತು.

ಶ್ರೀ ಬಿ.ವೈ.ಮಾದಿನೂರ, ಅಂದಿನ ಲೆಕ್ಕಾಧೀಕ್ಷಕರು, ಇವರು ತಮ್ಮ ಮೇಲೆ ಮಾಡಿರುವ ಆರೋಪಗಳ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಸರ್ಕಾರಕ್ಕೆ ಮನವಿ ಮತ್ತು ಆರೋಪಗಳಿಗೆ ಸಂಬಂಧಿಸಿದಂತೆ ದಾಖಲಾತಿ / ಪತ್ರಗಳ ಪ್ರತಿಗಳನ್ನು ಸಲ್ಲಿಸಿ, ಉಗ್ರಾಣದಲ್ಲಿ 27,13,947-63 ರೂ. ಸಾಮಗ್ರಿಗಳ ಕೊರತೆಗೆ ತಾವು ಕಾರಣರಲ್ಲವೆಂದೂ ತಮ್ಮನ್ನು ಆರೋಪ ಮುಕ್ತಗೊಳಿಸಿ ಇಲಾಖಾ ವಿಚಾರಣೆಯಿಂದ ಕೈ ಬಿಡುವಂತೆ ಕೋರಿದ್ದರು.

ಸದರಿ ಮನವಿ ಹಾಗೂ ಅವರು ಸಲ್ಲಿಸಿರುವ ಎಲ್ಲಾ ದಾಖಲಾತಿ ಪತ್ರಗಳ ಪ್ರತಿಗಳನ್ನು ಕೂಲಂಕಶವಾಗಿ ಪರಿಶೀಲಿಸಲಾಗಿ, ಇವರು ಉಗ್ರಾಣ ಸಾಮಗ್ರಿಗಳ ಕೊರತೆಗೆ ನೇರವಾಗಿ ಕಾರಣರಲ್ಲವೆಂದು ಕಂಡು ಬರುತ್ತದೆ. ಹಾಗಾಗಿ ಇವರ ಕರ್ತವ್ಯಲೋಪವೇನೂ ಇರುವುದಿಲ್ಲವೆಂದು ಸರ್ಕಾರವು ನಿರ್ಧರಿಸಿ ಇವರ ಮೇಲಿನ ಆರೋಪಗಳ ಬಗ್ಗೆ ಈಗಾಗಲೇ ಇಲಾಖಾ ವಿಚಾರಣೆ ನಡೆಸಲು ಹೊರಡಿಸಿದ ಆದೇಶ ಸಂಖ್ಯೆ. ಗ್ರಾಅಪ : 38 : ಇಎನ್‌ಕ್ಯೂ: 04 ದಿ. 6-4-2006 ರಲ್ಲಿನ ಇವರ ಹೆಸರನ್ನು ಕೈ ಬಿಡಲು ಸರ್ಕಾರವು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 38 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ.ವೈ.ಮಾದಿನೂರ, ಅಂದಿನ ಲೆಕ್ಕಾಧೀಕ್ಷಕರು, ಪಂಚಾಯತ್ ರಾಜ್ ಇಂಜನಿಯರಿಂಗ್ ವಿಭಾಗ, ಕೊಪ್ಪಳ ಇವರ ಮೇಲಿನ ಆರೋಪಗಳ ಬಗ್ಗೆ ಈಗಾಗಲೇ ಇಲಾಖಾ ವಿಚಾರಣೆ ನಡೆಸಲು ಹೊರಡಿಸಿದ ಆದೇಶ ಸಂಖ್ಯೆ. ಗ್ರಾಅಪ : 38 : ಇಎನ್‌ಕ್ಯೂ: 04 ದಿ. 6-4-2006 ನ್ನು ಸದರಿ ಅಧಿಕಾರಿಗೆ ಸಂಬಂಧಿಸಿದಂತೆ ಹಿಂಪಡೆದು, ಅವರ ಮೇಲಿನ ಆರೋಪಗಳನ್ನು ಕೈ ಬಿಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಪಿ.ಆರ್. 608

## ಸಹಕಾರ ಸಚಿವಾಲಯ

**ವಿಷಯ:** ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ)ರಾಮದುರ್ಗ ಬೆಳಗಾಂ ಜಿಲ್ಲೆ ಇದರ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರಡಿಯಲ್ಲಿ ಅನುಮತಿ ನೀಡುವ ಬಗ್ಗೆ

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ ಡಿಎಸ್‌ಕೆ/ಇಎಸ್‌ಟಿಎಸ್/93/2003-04 ದಿನಾಂಕ 15.3.2006

**ಪ್ರಸ್ತಾವನೆ:**

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿ, ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ(ನಿ) ರಾಮದುರ್ಗ,ಬೆಳಗಾಂ ಜಿಲ್ಲೆ ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಸಹಕಾರ ಸಂಘಗಳ ಕಾಯ್ದೆ 1959ರ ಪ್ರಕರಣ ಕಲಂ 27(1)ರನ್ವಯ ದಿನಾಂಕ 31.3.2006ರವರೆಗೆ ಮುಂದುವರಿಸಿರುತ್ತಾರೆ. ದಿನಾಂಕ 27.2.2006ರಲ್ಲಿ ಆಡಳಿತ ಮಂಡಳಿ ತೀರ್ಮಾನದನ್ವಯ ಪ್ರಸ್ತುತ 2004-05ನೇ ಸಾಲಿನಲ್ಲಿ ಕಾರ್ಖಾನೆಯ ಹಣಕಾಸಿನ ಪರಿಸ್ಥಿತಿ ತೃಪ್ತಿಕರವಾಗಿರದೆ ಇರುವುದರಿಂದ ಹಾಗೂ ಕಾರ್ಖಾನೆಯು ಅನುಷ್ಠಾನದ ಹಂತದಲ್ಲಿರುವುದರಿಂದ ಹಾಗೂ ಆ ಭಾಗದ ರೈತರ ಹಿತದೃಷ್ಟಿಯಿಂದ ಮತ್ತು 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ಸಾಧ್ಯವಾಗದೆ ಇರುವುದರಿಂದ ಆಡಳಿತ ಮಂಡಳಿಯಲ್ಲಿ ತೆಗೆದುಕೊಂಡ ತೀರ್ಮಾನದಂತೆ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಸೆಪ್ಟೆಂಬರ್ 2006ರೊಳಗೆ ನಡೆಸಲು ಸಕ್ಕರೆ ನಿರ್ದೇಶಕರು ಪ್ರಸ್ತಾವ ಸಲ್ಲಿಸುತ್ತಾ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 87 ಸಸಕಾ 2006 ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ರಾಮದುರ್ಗ, ಬೆಳಗಾಂ ಜಿಲ್ಲೆ ಇದರ 2004-05ನೇ ಮತ್ತು 2005-06ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ 30.9.2006 ರವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನ ಮಾರ್ಪಾಡುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ

**27ರ ಪ್ರಕರಣದಲ್ಲಿ**

27ನೇ ಪ್ರಕರಣದ ಉಪ ಪ್ರಕರಣ (1) ಪರಂತುಕದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಇಪ್ಪತ್ತನಾಲಕ್ಕು ತಿಂಗಳು ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ**

ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ 30.9.2006ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಕಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಾಣದ ರಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 605